*Editor and Publisher*
H. M. SHANKAR NARAYAN RAO, M.A.
*Assistant Professor and Head of the Department of Kannada*
SHARADA VILAS COLLEGE, MYSORE.

ಎಲ್ಲ ಹಕ್ಕುಗಳೂ ಲೇಖಕರವು

ಮುದ್ರಕರು :
**ಶಾರದಾ ಪ್ರಕಟನಾಲಯ**
ಅರಳೇಪೇಟೆ, ಬೆಂಗಳೂರು – ೨.

ಬೆಲೆ : ಸಾಧಾರಣ ಪ್ರತಿ ೧–೮–೦
ಕ್ಯಾಲಿಕೊ ಪ್ರತಿ ೨–೮–೦

ಮೊದಲ ಮುದ್ರಣ ೧೯೫೫

# ಸಂಪಾದಕರ ಮಾತು

---

ಸುಂದರವೂ ಹಾಗೂ ಸಂಸ್ಕಾರಕಾರಕವೂ ಆದ ಈ ಸಣ್ಣ ಕಥೆಗಳ ಸಂಪುಟ ಪ್ರಕಟವಾಗಿ ಬಹಳ ದಿನಗಳಾಗಬೇಕಾಗಿತ್ತು. ಆದರೆ 'ಶ್ರೇಯಾಂಸಿ ಬಹು ವಿಘ್ನಾನಿ' ಎಂಬ ಲೋಕೋಕ್ತಿಯಂತೆ ಒಂದಲ್ಲ ಒಂದು ಕಾರಣದಿಂದ ಈ ಗ್ರಂಥದ ಪ್ರಕಟನೆ ತಡವಾಗುತ್ತ ಬಂತು. ನನ್ನ ಕಾರ್ಯರಂಗ ಮೈಸೂರು; ಲೇಖಕರಿರುವುದು ಬೆಂಗಳೂರು. ಲೇಖಕರಿರುವ ಸ್ಥಳದಲ್ಲೇ ಗ್ರಂಥ ಅಚ್ಚಾಗಬೇಕೆಂದು ವಿಧಿ ಸಂಚು ಮಾಡಿದಂತೆ ತೋರುತ್ತದೆ. ಇದರಿಂದ ನನಗೆ ಅನುಕೂಲವೇ ಆಯಿತು. ಅಚ್ಚುಕೂಟಕ್ಕಾಗಿ ನಾನು ತೊಳಲುತ್ತಿದ್ದಾಗ ನನ್ನ ಮಿತ್ರರಾದ ಶ್ರೀ ಬಸವರಾಜು ಅವರು ಈ ಪುಸ್ತಕವನ್ನು ತಮ್ಮ ಅಚ್ಚುಕೂಟದಲ್ಲಿ ಮುದ್ರಿಸಿಕೊಡುವುದಾಗಿ ಮುಂದೆ ಬಂದರು. ಅಚ್ಚಿನ ಕರಡು ಪ್ರತಿಯನ್ನು ತಿದ್ದುವ ಹೊರೆಯನ್ನೂ ಹೊಣೆಯನ್ನೂ ಹೊತ್ತುಕೊಂಡರು. ಈ ಉಪಕಾರಕ್ಕಾಗಿ ನಾನು ಈ ನನ್ನ ತರುಣಮಿತ್ರರಿಗೆ ತುಂಬ ಕೃತಜ್ಞನಾಗಿದ್ದೇನೆ.

ನನ್ನ ಹಿರಿಯ ಮಿತ್ರರಾದ ಶ್ರೀ ಎಂ. ವಿ. ಸೀತಾರಾಮಯ್ಯನವರು ಕವಿಗಳು, ಕಥೆಗಾರರು, ಕಾದಂಬರಿಕಾರರು, ವಿಮರ್ಶಕರು. ಕನ್ನಡ ಜನರಿಗೆ ಇವರನ್ನೂ ಇವರ ಕೃತಿಗಳನ್ನೂ ನಾನು ಮತ್ತೆ ಪರಿಚಯಮಾಡಿಕೊಡಬೇಕಾಗಿಲ್ಲ. ಇವರು ನನ್ನ ಮಾಲೆಯಲ್ಲಿ ತಮ್ಮ ಗ್ರಂಥವನ್ನು ಪ್ರಕಟಿಸಲು ಒಪ್ಪಿದುದಕ್ಕಾಗಿ ಶ್ರೀಯುತರಿಗೆ ನಾನು ಅತ್ಯಂತ ಕೃತಜ್ಞನಾಗಿದ್ದೇನೆ.

ಕನ್ನಡಿಗರು ಈ ಕಥಾಸಂಕಲನವನ್ನು ಆದರದಿಂದ ಬರಮಾಡಿಕೊಳ್ಳುವರೆಂದು ನಂಬುತ್ತೇನೆ.

ಶಾರದಾ ಮಂದಿರ<br>ಮೈಸೂರು<br>೧೮–೧೦–೫೫

ಎಚ್. ಎಂ. ಶಂಕರನಾರಾಯಣರಾವ್<br>ಸಂಪಾದಕ

# ಬಿನ್ನಹ

ನನ್ನ ಸ್ವಂತ ಕಥೆಗಳ ಸಂಕಲನಗಳಲ್ಲಿ ಇದು ನಾಲ್ಕನೆಯದು. ಇದಕ್ಕೆ ಹಿಂದಿನದು ‘ ಬಿಸಿಲು – ಬೆಳುದಿಂಗಳು ’ ಪ್ರಕಟವಾದ (೧೯೫೩) ಒಂದೆರಡು ವರ್ಷಗಳಲ್ಲಿಯೆ ಇನ್ನೊಂದು ಸಂಕಲನ ಪ್ರಕಟವಾಗುವುದೆಂದು ನಾನು ನಿರೀಕ್ಷಿಸಿರಲಿಲ್ಲ. ಕಥೆಗಾಗಿ ಕನ್ನಡದ ಕೆಲವು ಪ್ರಮುಖ ಪತ್ರಿಕಾ ಸಂಪಾದಕರುಗಳ ಒತ್ತಾಯದ ಬೇಡಿಕೆ; ನನ್ನ ಹಿಂದಿನ ಸಂಕಲನಗಳಿಗೆ ವಾಚಕವೃಂದದಿಂದ, ವಿಮರ್ಶಕ ವರ್ಗದಿಂದ, ದೊರೆತ ಆದರದ ಹಾಗೂ ಮೆಚ್ಚಿಗೆಯ ಸ್ವಾಗತ – ಇವೇ ನನ್ನ ಈಚಿನ ಕಥೆಗಳ ರಚನೆಗೆ ಕಾರ್ಯಕಾರಿಯಾದ ಪ್ರೇರಣೆ. ಇದರ ಜೊತೆಗೆ, ಕಥೆ ಕೇಳುವವರು (ಅಥವಾ ಓದುವವರು) ಮತ್ತು ಪ್ರಕಟಿಸುವವರು ಇರುವವರೆಗೆ, ಕಥೆ ಕಟ್ಟಿ ಹೇಳಬೇಕೆಂಬ ದುರ್ದಮ್ಯವಾದ ಮೂಲ ಪ್ರೇರಣೆ ಕಥೆಗಾರನಿಗೆ ಕೈಸೋಲುವವರೆಗೂ ಇದ್ದೇ ಇರುತ್ತದೆ. ಈ ‘ ಕಾದಂಬರಿಯ ಯುಗ ’ದಲ್ಲಿಯೂ ಸಣ್ಣ ಕಥೆಗಳನ್ನು ಓದುವವರೂ ಪ್ರಕಟಿಸುವವರೂ ಇದ್ದಾರೆಂಬುದು ಸಂತೋಷದ ಸಂಗತಿ.

ಈ ಸಂಕಲನದ ಕಥೆಗಳನ್ನು ಮೊದಲು ತಮ್ಮ ಪತ್ರಿಕೆಗಳಿಗೆ ಪ್ರೀತಿಯಿಂದ ಬರಮಾಡಿಕೊಂಡ ‘ ಕತೆಗಾರ ’, ‘ ಜೀವನ ’, ‘ ಪ್ರಭಾತ ’, ‘ ಉಷಾ ’, ‘ ಪ್ರಜಾಮತ ’, ‘ ಪ್ರಬುದ್ಧ ಕರ್ಣಾಟಕ ’, ‘ ಚಿತ್ರಗುಪ್ತ ’— ಈ ಪತ್ರಿಕೆಗಳ ಸಂಪಾದಕರುಗಳಿಗೆ ನಾನು ತುಂಬ ಕೃತಜ್ಞ.

ಈ ಕಥೆಗಳು ಸಂಕಲನ ರೂಪದಲ್ಲಿ ಹೊರಬರಲು ನನ್ನ ಮಾನ್ಯಮಿತ್ರರಾದ ಶ್ರೀಮಾನ್ ಎಚ್. ಎಂ. ಶಂಕರನಾರಾಯಣರಾವ್, ಎಂ.ಎ. ಅವರ ಉತ್ಸಾಹ – ಪ್ರೋತ್ಸಾಹಗಳೆ ಮುಖ್ಯ ಕಾರಣ. ಈ ಪ್ರಕಟನ ಕಾರ್ಯದ ಅವರ ಉಪಕಾರ ದೊಡ್ಡದು. ಇದಕ್ಕಾಗಿ ನಾನು ಅವರಿಗೆ ವಿಶೇಷ ಚಿರಋಣಿ.

ಇನ್ನು ನನ್ನ ಕಥೆಗಳ ಬಗೆಗೆ ನಾನೆ ಹೇಳಿಕೊಳ್ಳಬೇಕಾದ್ದು ಏನೂ ಇಲ್ಲ. ಅವನ್ನು ಓದುಗರ ಮಡಿಲಿಗೆ ಹಾಕಿದ್ದೇನೆ. ಅವರ ‘ ಕರುಣೆಯ ತೊಟ್ಟಿಲ ಶಿಶು ’ ನಾನು.

೧೬–೧೦–೧೯೫೫
ಮನ್ಮಥ–ಆಶ್ವಯುಜ ಶು|| ಪಾಡ್ಯಮಿ

—ಮೈಸೂರು ಸೀತಾರಾಮಯ್ಯ

ಪೂಜ್ಯ ಗುರುವರ್ಯ

ಶ್ರೀ

**ನಾ. ಕಸ್ತೂರಿ**

**ಅವರಿಗೆ**

ಭಕ್ತಿ ಪ್ರೇಮಪುರಸ್ಸರವಾದ

**ಕಾಣಿಕೆ**

# ಕಥಾನುಕ್ರಮಣಿಕೆ

# ಕರುಣೆ

"ಅಮ್ಮಾ ಅಮ್ಮಾ...."

"..............."

"ಅಮ್ಮಾ, ಅಮ್ಮಾ ಾ" – ಕೂಗುತ್ತಲೇ ಅಗುಳಿ ಹಾಕಿದ್ದ ಬಾಗಿಲನ್ನು ಮುಂಡಿಯಿಂದ ಡಬಡಬನೆ ಒದೆಯತೊಡಗಿದ ರಾಮು.

ಮಕ್ಕಳೆಲ್ಲ ಊಟಮಾಡಿ ಶಾಲೆಗೆ ಹೋದ ಮೇಲೆ ಶಾರದಮ್ಮನವರು ಎಲೆಗೋಮೆಮಾಡಿ, ಮುಂದಿನ ಬಾಗಿಲನ್ನು ಹಾಕಿಕೊಂಡು, ಅಡುಗೆಯ ಮನೆಯಲ್ಲಿ ತಮ್ಮ ಊಟದ ಸಿದ್ಧತೆಯಲ್ಲಿದ್ದರು. ಆಗ, ಬಾಗಿಲು ಬಡಿದ ಸದ್ದು ಕೇಳಿತು; ರಾಮುವಿನ ಕರೆಕೂಗೂ ಕೇಳಿತು. ಹೊರಬಂದು ಬಾಗಿಲು ತೆರೆದರು. ಹಾವು ಮೆಟ್ಟಿದವರಂತೆ ಹಿಂದಕ್ಕೆ ಹಾರಿ, ಉದ್ಗಾರ ತೆಗೆದರು:

"ಇದೇನೋ ಹಾಳಾದ್ದು ಅಧ್ವಾನ; ಇದೆಲ್ಲಿ ಸಿಕ್ಕಿತೋ ಈ ಶನಿ ಮುಂಡೇದು! ಸ್ಕೂಲಿಗೆ ಹೋಗೋದು ಬಿಟ್ಟು ಇದನ್ನ ಯಾಕೋ ಕರಕೊಂಡು ಬಂದೆ?"

"ನಾನು ಕರಕೊಂಡು ಬರಲಿಲ್ಲ, ಅಮ್ಮ. ನಮ್ಮ ಬೀದೀ ಕೊನೇಲಿ ತಿರುಗಿಕೊಂಡಾಗ, ಅಳೋ ಹಾಗೆ ಕೂಗುತ್ತಾ ಮಲಗಿತ್ತು. ಅಯ್ಯೋ ಪಾಪ ಅಂತ ಬಗ್ಗಿ ನೋಡಿದೆ. ಯಾರು ಹೊಡೆದರೋ ಏನೋ, ತಲೇಲಿ ರಕ್ತ ಸುರೀತಾ ಇತ್ತು. ತಲೇಮೇಲೆ ಸ್ವಲ್ಪ ನುಣ್ಣಾನೆ ಮಣ್ಣು ಹಾಕಿ ಮೆತ್ತಿದೆ. ರಕ್ತ ಸುರಿಯೋದು ನಿಂತಿತು. ಹಾಗೇ ಹೊರಟುಹೋಗ್ತಾ ಇದ್ದೆ. ಮತ್ತೆ ಅಳುವುದಕ್ಕೆ ಶುರುಮಾಡಿತು. ಅಯ್ಯೋ ಪಾಪ ಅಂತ ಟಿಫಿನ್‌ಕ್ಯಾರೀಯಿಂದ ಒಂದು ತುತ್ತು ಮಜ್ಜಿಗೆ ಅನ್ನ ಹಾಕಿದೆ; ತಿಂತು. ನಾನು ಸ್ಕೂಲಿಗೆ ಹೋದೆ. ನನ್ನ ಹಿಂದೇನೇ ಬಂದುಬಿಡುತು. ಏನು ಮಾಡಿದರೂ ನನ್ನ ಬಿಟ್ಟು ಹೋಗಲೇ ಇಲ್ಲ. ಕ್ಲಾಸಿಗೂ ಬಂದುಬಿಡುತು. ಮೇಷ್ಟ್ರು ಹೊರಗೆ ಬಿಟ್ಟು ಬಾ ಅಂದ್ರು. ಏನು ಮಾಡಿದರೂ ಹೊರಗೆ ಹೋಗಲೇ ಇಲ್ಲ. ಎಷ್ಟು ಸಲ ಹೊರಕ್ಕೆ ಬಿಟ್ಟರೂ ಒಳಕ್ಕೆ ಬರುತ್ತ ಇತ್ತು. ಮೇಷ್ಟರನ್ನೇ ಕೇಳಿ, ಮನೆಗೆ ಬಂದುಬಿಟ್ಟೆ ಕಣಮ್ಮಾ...."

" ಸರಿ ಸರಿ, ಎಲ್ಲ ಕಂಡಿದೀನಿ. ನಾಯಿಮರಿ ಸಾಕಬೇಕೂ ಅಂತ ಆಸೆ ಯಾಯಿತು. ಎಷ್ಟು ಸಲ ಬೇಡ ಅಂದರೂ ಕೇಳೋದಿಲ್ಲ, ನಾಯಿಮರಿ ಹಿಡಿದು ಕೊಂಡು ಬರೋದು, ಅವರ ಕೈಲಿ ಬೈಸಿಕೊಳ್ಳೋದು, ಆಮೇಲೆ ಅದನ್ನು ಆಚೆಗೆ ಅಟ್ಟೋದು. ನನಗೇನು, ಅವರು ಬರುತ್ತಲೂ ನಿನಗೆ ಶಾಸ್ತಿ ಆಗುತ್ತೆ. ಸ್ಕೂಲಿಗೆ ಬೇರೆ ತಪ್ಪಿಸಿಕೊಂಡಿದ್ದೀ....ಅದು ಸರಿ, ಒಂದು ಕೈಲಿ ನಾಯಿಮರಿ, ಇನ್ನೊಂದು ಕೈಲಿ ಪುಸ್ತಕ. ಟಿಫಿನ್‌ಕ್ಯಾರೀರು ಏನು ಮಾಡಿದೆ? ಎಲ್ಲಿ, ಕಾಣೋದಿಲ್ಲವಲ್ಲ ?"

ರಾಮು ತಲೆ ಕೆರೆದ.

" ಸ್ಕೂಲಿನಲ್ಲೇ ಮರೆತುಬಿಟ್ಟೆಯೇನೋ ?"

"................"

" ಏನು ಮಾಡಿದೆಯೋ ? ಬಗುಳೋ."

ರಾಮು ಬಾಯಿಬಿಡಲಿಲ್ಲ ; ತುಟಿ ಉರುಗಿತ್ತು ; ಮುಖ ಖಿನ್ನವಾಗಿತ್ತು. ಕೈಯ ಮೇಲೇ ನಿದ್ದೆಯ ಮಂಪರದಲ್ಲಿದ್ದ ನಾಯಿಮರಿ ಮೆಲ್ಲನೆ ಬಗುಳಿತು.

" ಏನಾಯಿತೋ ? ಯಾರಾದರೂ ಕದ್ದುಕೊಂಡರೇನೋ ?"

" ಇಲ್ಲ ಅಮ್ಮಾ. ಇಲ್ಲ....ಮತ್ತೇ ಮತ್ತೇ...."

" ಏನು ಮತ್ತೆ....ಏನಾಯಿತು...."

" ನಾಯಿಗೆ ಅನ್ನ ಹಾಕಿದ ಮೇಲೆ ದಾರೀಲೇ ಮರೆತುಬಿಟ್ಟೆ ಕಣಮ್ಮ. ಹಿಂದಕ್ಕೆ ಬರೋವಾಗ ಅಲ್ಲಿರಲೇ ಇಲ್ಲ."

" ಹಾಳಾಗಿ ಹೋಗು. ಅವರು ಸಂಜೆ ಮನೆಗೆ ಬರಲಿ, ಆಗುತ್ತೆ ದೊಣ್ಣೆ ಸೇವೆ. ಬೆನ್ನಿಗೆ ಎಣ್ಣೆ ಹಚ್ಚಿಕೊಂಡಿರು " ಎಂದು ಶಾರದಮ್ಮನವರು ಊಟಕ್ಕಾಗಿ ಅಡುಗೆಯ ಮನೆಗೆ ತೆರಳಿದರು.

× × × ×

ತಾಯಿ " ಬೆನ್ನಿಗೆ ಎಣ್ಣೆ ಹಚ್ಚಿಕೊಂಡಿರು " ಎಂದದ್ದರಿಂದ ನಾಯಿಯ ತಲೆಗೆ ಏನಾದರೂ ಎಣ್ಣೆ ಸವರಿದರೆ ಗಾಯಕ್ಕೆ ಒಳ್ಳೆಯದೆಂದು ರಾಮುವಿಗೆ ತೋರಿತು. ಮೊನ್ನೆ ತಾನೆ ತಾನು ಬಿದ್ದು ಮಂಡಿ ಒಡೆದುಕೊಂಡಿದ್ದಾಗ, ಪಕ್ಕದ ಮನೆ ನರಸಿಂಗರಾಯರು ತನ್ನ ಮಂಡಿಯ ಗಾಯಕ್ಕೆ ಯಾವುದೋ ತೈಲವನ್ನು ಲೇಪಿಸಿದ್ದು ನೆನಪಿಗೆ ಬಂದು, ನರಸಿಂಗರಾಯರ ಮನೆಗೆ ಹೋದನು.

ನರಸಿಂಗರಾಯರು ರಿಟೈರ್ಡ್ ಅಮಲ್ದಾರರು. ತಮ್ಮ ಸರ್ವಿಸಿನಲ್ಲಿ ಹಲವು ಊರುಗಳನ್ನು ಸುತ್ತಿದ್ದರು. ಪೆನ್‌ಷನ್ ಆದ ಮೇಲೆ ಅವರು ಮೈಸೂರಿನಲ್ಲಿ ನೆಲಸಿ ಎರಡು ಮೂರು ವರ್ಷವಾಗಿತ್ತಷ್ಟೆ. ಕೃಷ್ಣಪ್ಪನವರ (ರಾಮುವಿನ ತಂದೆ) ಪಕ್ಕದ ಮನೆಯನ್ನು ಕೊಂಡುಕೊಂಡು, ಅಲ್ಲಿಗೆ ವಾಸಕ್ಕೆ ಬಂದು ಒಂದು ವರ್ಷವಾಗಿತ್ತು. ಕೃಷ್ಣಪ್ಪನವರು ಬಡಗುಮಾಸ್ತರಾದರೂ ಸ್ವಂತ ಮನೆ ಉಳ್ಳವರಾದ್ದರಿಂದ, ನರಸಿಂಗರಾಯರ ಸ್ನೇಹಕ್ಕೆ ಪಾತ್ರರಾಗಿದ್ದರು. ಈ ಸ್ನೇಹವನ್ನು ಬೆಸೆಯುವುದರಲ್ಲಿ ರಾಮುವಿನ ಪಾತ್ರವೂ ಹಿರಿದಾಗಿಯೇ ಇದ್ದಿತು. ಮಕ್ಕಳೇ ಇಲ್ಲದ ನರಸಿಂಗರಾಯರಿಗೂ ಅವರ ಹೆಂಡತಿ ಸುಂದರಮ್ಮನವರಿಗೂ ರಾಮು ಮುದ್ದಿನ ಬಾಲಕನಾಗಿದ್ದನು. ಈ ವೃದ್ಧ ದಂಪತಿಗಳು ಕೃಷ್ಣಪ್ಪನವರ ಸಂಸಾರದ ಇತರರೆಲ್ಲರೊಂದಿಗೆ ಬಾಯಿ ತುಂಬಾ ಮಾತಾಡಿ ನೆರೆಹೊರಕೆಯ ನಲ್ಮೆಯನ್ನು ತೋರುತ್ತಿದ್ದರು. ರಾಮು ಒಬ್ಬನಿಗೆ ಮಾತ್ರ ನಿತ್ಯ ಏನಾದರೊಂದು ಸವಿತಿನಸನ್ನು ಕೊಟ್ಟು ಸಂತೃಪ್ತಿಗೊಳಿಸುತ್ತಿದ್ದರು.

ರಾಮು ನರಸಿಂಗರಾಯರ ಮನೆಯ ಒಳಕ್ಕೆ ಬಂದಾಗ, ಅವರು ಕುರ್ಚಿಯ ಮೇಲೆ ಕುಳಿತು ಪೇಪರು ಓದುತ್ತಿದ್ದರು. ಸುಂದರಮ್ಮನವರು ಚಾಪೆಯ ಮೇಲೆ ಮಲಗಿ ವಿಶ್ರಾಂತಿ ತೆಗೆದುಕೊಳ್ಳುತ್ತಿದ್ದರು.

"ಏನು ರಾಮು, ಸ್ಕೂಲಿಗೆ ಹೋಗಲಿಲ್ಲವೆ?"

"................"

"ಇದು ಯಾವುದು, ನಾಯಿಮರಿ?" ರಾಯರ ಕಣ್ಣುಗಳಲ್ಲಿ ಕುತೂಹಲ ಆಸಕ್ತಿಗಳು ಫಳಫಳಿಸುತ್ತಿದ್ದುವು.

"ದಾರೀಲಿ ಸಿಕ್ಕಿತು, ಕರಕೊಂಡು ಬಂದೆ. ಒಳ್ಳೆ ಬಿಳೀ ನಾಯಿಮರಿ. ಚೆನ್ನಾಗಿದೆ, ಅಲ್ಲವೆ?"

"ಎಲ್ಲಿ, ತಾ ಇಲ್ಲಿ, ನೋಡೋಣ?"

ಸುಂದರಮ್ಮನವರಿಗೆ ನಿದ್ದೆ ಬಂದಿರಲಿಲ್ಲ. ಎದ್ದು ಕುಳಿತು, "ಎಲ್ಲಿ ತಾ ನೋಡೋಣ ಅಂದಾಗಲೇ ನನಗೆ ಗೊತ್ತು – ಅದು ನಮ್ಮ ಮನೆಯಲ್ಲೇ ಪ್ರಾಣ ಬಿಡುತ್ತೆ ಅಂತ. ರಿಟೈರ್ ಆದ ಮೇಲಾದರೂ ಮಡಿಗಿಡಿ ಮಾಡೋಣ, ನಾಯಿ ಸಾಕುವುದಿಲ್ಲ ಅಂದಿದ್ದಿರಲ್ಲ, ಜ್ಞಾಪಕ ಇಲ್ಲವೆ?" ಎಂದರು.

ರಾಮು ಆಗಲೇ ನಾಯಿಯನ್ನು ರಾಯರ ತೊಡೆಯ ಮೇಲೆ ಕೂರಿಸಿ ಬಿಟ್ಟಿದ್ದ. ಹೊಸಬರನ್ನು ಮೂಸಿ ನೋಡುತ್ತಿತ್ತು ಮರಿ.

" ಹಾಲು ಗೀಲು ಕುಡಿಸಿದ್ದೀಯಾ, ರಾಮು ?" – ರಾಯರು ಕೇಳಿದರು.

ರಾಮು ತಲೆಯಲ್ಲಾಡಿಸಿದ.

" ಲೇ ಸಣ್ಣ ತಟ್ಟೇಲಿ ಸ್ವಲ್ಪ ಹಾಲು ತಗೊಂಡು ಬಾರೇ. ಪಾಪ, ಏಟು ಬಿದ್ದಿದೆ ಮರೀಗೆ; ಹೊಟ್ಟೆ ಹಸೀತಾ ಇರಬಹುದು. ಕುಡಿಯಲಿ ಪಾಪ."

ಸುಂದರಮ್ಮನವರು ಗೊಣಗುತ್ತ ಎದ್ದು ಹೋದರು, ಹಾಲು ತರುವುದಕ್ಕೆ.

" ನಾಯಿ ಚೆನ್ನಾಗಿಲ್ಲವೆ ಮಾವಯ್ಯ ?"– ರಾಮು ಕೇಳಿದ ಹಿಗ್ಗಿನಿಂದ, ಹೆಮ್ಮೆ ಬೆರೆತ ಕುತೂಹಲದಿಂದ.

" ಭೇಷಾಗಿದೆ."

ನಿರೀಕ್ಷಿಸಿದ್ದ ಉತ್ತರ ಕೇಳಿ ರಾಮುವಿನ ಮುಖ ಅರಳಿತು. ಕೆಲಹೊತ್ತು ತನ್ನ ನಾಯಿಮರಿಯ ಸೌಂದರ್ಯ ಸಂಭಾವನೆಯಲ್ಲಿ ಮಗ್ನನಾಗಿದ್ದನವನು. ಸುಂದರಮ್ಮನವರು ಹಾಲು ತಂದುಕೊಟ್ಟರು. ನರಸಿಂಗರಾಯರು ಹಾಲಿನ ತಟ್ಟೆಯನ್ನು ನಾಯಿಯ ಮುಂದೆ ಒಡ್ಡಿದರು; ಅದು ಕುಡಿಯತೊಡಗಿತು.

" ಹಾಲಿನ ಹಾಗೇನೇ, ಒಳ್ಳೇ ಬಿಳೀಬಣ್ಣ."

" ಹಣೇ ಮೇಲೆ, ಹೊಟ್ಟೇ ಮೇಲೆ, ಕರೀ ಮಚ್ಚೆ ಇದೆ. ಆದರೂ ಪರವಾ ಇಲ್ಲ."

" ಹೌದು, ಹೌದು. ಅದೂ ಇಲ್ಲದೆ ಪೂರ್ತಿ ಬಿಳಿಯಾಗಿದ್ದರೆ ಚೆನ್ನಾಗಿತ್ತು. ಆದರೂ, ಒಳ್ಳೇ ಜಾತೀ ನಾಯಿ, ಅಲ್ಲವೆ ?"

" ನಿನಗೆ ಹೇಗೆ ಗೊತ್ತು ?"

" ಕಿವಿ ಹಿಡಿದು ಎತ್ತಿ ನೋಡಿದೆ, ಮಾವಯ್ಯ !"

" ಏನು, ಬ್ರಾಹ್ಮಣ ನಾಯಿಯೇನೋ ?" ಸುಂದರಮ್ಮನವರು ನಗುತ್ತ ಕೇಳಿದರು.

" ಅವಳಿಗೆ ಹಾಸ್ಯ ಕಣಪ್ಪ, ನಾನು ನಾಯಿ ಸಾಕೋದು ಇಷ್ಟವಿಲ್ಲ.... ನನಗೂ ಒಂದು ಸಲ ಬೇಡ ಅಂತಲೇ ಅನ್ನಿಸುತ್ತೆ...."

" ನಾಯಿ ಸಾಕೋದು ಕೆಟ್ಟದ್ದೆ, ಮಾವಯ್ಯ ?"

"ಅಲ್ಲ ಅಪ್ಪ, ಪ್ರಾಣಿ ಮಾತ್ರವನ್ನು ಯಾವುದನ್ನು ಕಾಪಾಡಿದರೂ ಕೆಟ್ಟದ್ದಲ್ಲ. ಆದರೆ...."

ನರಸಿಂಗರಾಯರು ಕ್ಷಣಕಾಲ ಮೌನವಾಗಿದ್ದರು. ಅವರ ಮುಖದಲ್ಲಿ ದುಗುಡದ ಮುದ್ರೆಯೊತ್ತಿತ್ತು. ಅದೇನೆಂದು ರಾಮುವಿಗೆ ಅರ್ಥವಾಗಲಿಲ್ಲ; ಅವನು ಸುಂದರಮ್ಮನವರ ಕಡೆ ತಿರುಗಿ ನೋಡಿದ. ಅವರ ಮುಖವೂ ಗಂಭೀರ ವಾಗಿತ್ತು.

"ನೋಡಪ್ಪ, ನಾವು ಸಾಕಿದ್ದು ಯಾವುದೂ ಏಳಿಗೆಯಾಗೋದಿಲ್ಲ. ನಿಮ್ಮ ಮಾವಯ್ಯ ಸಾಕಿದ್ದು ಒಂದೊಂದೇ....ಗಿಣಿಗಳನ್ನು ಸಾಕಿದರು, ಜಿಂಕೆ ಮರಿ ಸಾಕಿದರು, ಪಾರಿವಾಳ ಸಾಕಿದರು, ಹಸು ಕಟ್ಟಿದರು, ಆಡಿನಮರಿ ಕಟ್ಟಿದರು...ಪಾಪ, ಅವರೇನು ಮಾಡುತ್ತಾರೆ...ನನ್ನ ಕೈಲಿ ಬೆಂಕಿ ಇದೆಯಪ್ಪ.... ನಾನು ಹಾಲು ಹೊಯ್ದು ಸಾಕಿದ್ದು ಒಂದೂ ಬದುಕಲಿಲ್ಲ...."

ಗಂಡ ಹೆಂಡಿರಿಬ್ಬರೂ ಮೌನ.

ರಾಮು ಮೆಲ್ಲನೆ ಕೇಳಿದ: "ಗಾಯಕ್ಕೆ ಸ್ವಲ್ಪ ಏನಾದರೂ ಎಣ್ಣೆ ಹಚ್ಚ ಬೇಕಾಗಿತ್ತು...." ಕೇಳುತ್ತಲೇ ನಾಯಿಯ ಮರಿಯನ್ನು ರಾಯರ ತೊಡೆಯ ಮೇಲಿನಿಂದ ಬಹು ಮೆಲ್ಲನೆ ಎತ್ತಿಕೊಂಡು ತನ್ನ ಮುಂಗೈತೊಟ್ಟಿಲ ಮೇಲೆ ಮಲಗಿಸಿಕೊಂಡು, ಹೊರಡಲನುವಾದ.

"ಗಾಯಕ್ಕೆ ಎಣ್ಣೆ ಬೇಕು ಅಂದೆ, ಅಲ್ಲವೆ?" ಎಂದು ರಾಯರು ಎದ್ದು ಹೋಗಿ, ಸ್ವಲ್ಪ ಕಾಡ್‌ಲಿವರ್ ಎಣ್ಣೆಯನ್ನು ತಂದು ಗಾಯಕ್ಕೆ ಲೇಪಿಸಿದರು.

"ನೀವೇ ಸಾಕಿಕೊಂಡಿದ್ದರೆ ಚೆನ್ನಾಗಿತ್ತು....ಅಪ್ಪ ಬಯ್ತಾರೆ....ಹೊಡೀ ತಾರೆ...."

ರಾಯರು ಮೌನವಾಗಿದ್ದರು. ರಾಮು ನಿಧಾನವಾಗಿ, ಭಾರವಾದ ಎದೆ ಯಿಂದ, ಮನೆಯ ಕಡೆ ನಡೆದ.

× × × ×

ಮನೆಯಲ್ಲಿ ರಾಮುವೇ ಕಿರಿಯವನು. ಮನೆಯವರೆಲ್ಲರ ಮುದ್ದು ಗುದ್ದು ಅವನಿಗೇ ಮೀಸಲು. ಸಂಜೆ ಸ್ಕೂಲು ಕಾಲೇಜಿನಿಂದ ಬಂದ ಅವನ ಇಬ್ಬರು ಅಣ್ಣಂದಿರು, ಒಬ್ಬಳು ಅಕ್ಕ – ಇವನ ನಾಯಿಸಾಕುವ ಹವಣಿಕೆಗೆ ಅಷ್ಟಾಗಿ ಗಮನವನ್ನೆ ಕೊಡಲಿಲ್ಲ. ಅವರ ಔದಾಸೀನ್ಯ ರಾಮುವಿನ ಮನಸ್ಸಿಗೆ ದುಃಖ

ವುಂಟುಮಾಡಿತು. ತನ್ನ ಬಡ ನಾಯಿಮರಿಯನ್ನು ಕೇಳುವವರೇ ಇಲ್ಲ ವಾಯಿತೇ ಎಂದು ಕೊರಗಿದನು. ತನ್ನ ಪುಟ್ಟ ಹೃದಯದ ಅಪಾರಕರುಣಾ ಮೃತವನ್ನು ಅದಕ್ಕೆ ಆಗಲೇ ಧಾರೆಯೆರೆದುಬಿಟ್ಟಿದ್ದನು. ಕೂಡಲೆ ನಾಯಿಯನ್ನು ಸಾಕಿಕೊಳ್ಳಲು ಇಷ್ಟ ತೋರದಿದ್ದರೂ, 'ಮಾವಯ್ಯ' ಕರುಣಾಮೂರ್ತಿಯಾಗಿ ಕಂಡರವನಿಗೆ. ತನ್ನ ತಂದೆಯೋ? ಕ್ರೌರ್ಯದ ಮುದ್ದೆ....ಥೆ ಥೆ....ಹಾಗೆನ್ನ ಬಾರದು. ಚೇಷ್ಟೆ ಮಾಡಿದಾಗ ಗುದ್ದು ಕೊಟ್ಟರೂ ಇತರ ಹೊತ್ತು ಮುದ್ದಿಸುವ ತಂದೆ, ಕಡಮೆ ಸಂಬಳವಾದರೂ ಕೇಳಿದ್ದನ್ನು ತಂದುಕೊಡುವ ತಂದೆ....ಬಹುಶಃ ನಾಯಿಯನ್ನು ಸಾಕಿಕೊಳ್ಳಲು ಅಡ್ಡಿಪಡಿಸಲಾರರು....

ನಾಳೆಯಿಂದ ನನಗೆ ಕಾಫಿ ಬೇಡ....ನನ್ನ ಪಾಲಿನ ಹಾಲು ನಾಯಿಗೆ....

ಪಾಪ, ರಾತ್ರಿ ಛಳಿಯಾಗುತ್ತೆ....ಒಂದು ಗೋಣೀಪಟ್ಟೆ, ಒಂದು ಚಿಕ್ಕ ಜಾಯಿಕಾಯಿ ಪೆಟ್ಟಿಗೆ....

ರಾಮುವಿನ ಕನಸಿನ ಗೋಪುರ ಮುರಿದುಬಿತ್ತು. ಕಾರಣ, ಬೆನ್ನ ಮೇಲೆ ಗುದ್ದು ಬಿತ್ತು! ತೊಡೆಯ ಮೇಲೆ ಪುಸ್ತಕ ಇದ್ದರೂ ಕನಸಿನಲ್ಲಿ ಮುಳುಗಿದ್ದ ಅವನಿಗೆ ಆಗಲೇ ಎಚ್ಚರ—

"ಮೊದಲು ನಾಯಿಯನ್ನು ಹೊರಕ್ಕೆಸೆದು ಬಾ! ನಿಮ್ಮ ಹೊಟ್ಟೆಗೆ ಹಾಕುವುದಕ್ಕೇ ಗತಿ ಇಲ್ಲ, ಇನ್ನು ಅದಕ್ಕೆ ಬೇರೆ ಎಲ್ಲಿಂದ ತರೋಣ...."

ಶಾರದಮ್ಮ ನಡೆದದ್ದನ್ನೆಲ್ಲ ಗಂಡನಿಗೆ ತಿಳಿಸಿ, ಹೊಡೆಯಬೇಡಿ ಎಂದು ಎಚ್ಚರಿಕೆ ಕೊಟ್ಟಿದ್ದರೂ ಕೃಷ್ಣಪ್ಪನವರು ಕೆರಳಿಬಿಟ್ಟಿದ್ದರು. ನಾಯಿಮರಿ ತಂದದ್ದಲ್ಲ ಅವರನ್ನು ಅಷ್ಟಾಗಿ ಕೆರಳಿಸಿದ್ದು; ಟಿಫಿನ್‌ಕ್ಯಾರಿಯರನ್ನು ಕಳೆದು ಕೊಂಡದ್ದು. ರಾಮುವಿಗೆ ಇದು ಅರ್ಥವಾಗಲಿಲ್ಲ. ತಂದೆ ಕ್ರೌರ್ಯದ ಮುದ್ದೆಯೇ ಎಂದು ನಿರ್ಧರಿಸಿಕೊಂಡನು.

ರಾಮುವಿನ ರೋದನ ಪ್ರಾರಂಭವಾಯಿತು. ಅವನು ಸ್ಥಳ ಬಿಟ್ಟು ಕದಲ ಲಿಲ್ಲ. ಕೃಷ್ಣಪ್ಪನವರ ಆಜ್ಞೆಯಂತೆ, ರಾಮುವಿನ ಅಣ್ಣ ನಾಯಿಮರಿಯನ್ನು ಹೊರಕ್ಕೆ ಬಿಡಲು ಹೋದ. ಒರಟು ಹಿಡಿತಕ್ಕೆ ಸಿಲುಕಿ ನಾಯಿಯೂ ಕುಂಯ್ ಗುಟ್ಟುವುದಕ್ಕೆ ಪ್ರಾರಂಭಿಸಿತು. 'ಬೇಡವೋ ಬೇಡವೋ' ಎಂದು ರಾಮು ಅಣ್ಣ ನನ್ನು ಅಳುತ್ತಲೇ ಹಿಂಬಾಲಿಸಿದ. ಕೃಷ್ಣಪ್ಪನವರೂ ಕೂಗಾಡುತ್ತಾ ಹಾರಾ ಡುತ್ತಾ ಹೊರಕ್ಕೆ ಬಂದರು.

ಇಷ್ಟೆಲ್ಲ ಗಲಭೆ, ನಿಶ್ಶಬ್ದ ಮೌನ ವಾತಾವರಣದಲ್ಲಿ ಸಂಧ್ಯಾವಂದನೆ ಮಾಡುತ್ತಾ ಕುಳಿತಿದ್ದ ನರಸಿಂಗರಾಯರ ಕಿವಿ ಮುಟ್ಟದೆ ಇರಲಿಲ್ಲ. ರಾಮುವಿನ ಅಳುವಿನ ರಾಗದೊಂದಿಗೆ ಮಿಳಿತವಾಗಿದ್ದ ನಾಯಿಮರಿಯ ಕುಂಯ್ ಕುಂಯ್ ಕೇಳಿ, ಸಂದರ್ಭವೇನೆಂಬುದು ರಾಯರಿಗೆ ಅರ್ಥವಾಯಿತು. ಅವರ ಕರುಣೆ ಗೃಹರಾಜಕೀಯದ ಬಿಕ್ಕಟ್ಟನ್ನು ಪರಿಹರಿಸಿತು. ನಾಯಿಮರಿಯನ್ನು ತಾವು ಸಾಕಿಕೊಳ್ಳುವುದಾಗಿ ಹೇಳಿ ನರಸಿಂಗರಾಯರು ಅದನ್ನು ರಾಮುವಿನಿಂದ ತೆಗೆದು ಕೊಂಡು ಹೋದರು. ಪತ್ನಿಯ ಕಟ್ಟಾಜ್ಞೆ, ಅದರ ಫಲವಾದ ತಮ್ಮ ಪ್ರತಿಜ್ಞೆ – ಇವುಗಳ ಕಟ್ಟೆಯನ್ನು ಮೀರಿ ಹರಿದಿತ್ತು ಅವರ ಕರುಣೆಯ ಹೊನಲು. ರಾಮು ಅವರನ್ನು ಹಿಂಬಾಲಿಸಿದ. ರಾತ್ರಿ ಅವರ ಮನೆಯಲ್ಲೇ ಅವನ ಊಟ.

"ಲೋ, ರಾಮು, ನಿನ್ನನ್ನೂ ಸಾಕಿಕೊಂಡುಬಿಡುತ್ತೇವೆ. ನಮ್ಮ ಮನೆಯಲ್ಲೇ ಇದ್ದುಬಿಡೋ" ಎಂದರು ಸುಂದರಮ್ಮನವರು, ರಾಮು ಮಲಗಲು ಮನೆಗೆ ಹಿಂತಿರುಗುವ ವೇಳೆಯಲ್ಲಿ.

"ಓಹೋ! ನಮ್ಮ ಅಪ್ಪ ಒಪ್ಪಿದರೆ ಬಂದುಬಿಡುತ್ತೇನೆ."

"ಜೊತೆಗೆ ಬರಲೇನೋ, ಕತ್ತಲೆ?"

"ಏನೂ ಬೇಡ. ನಾನು ಗಂಡಸಲ್ಲವೆ?"

ಹಾಸಿಗೆಯ ಮೇಲೆ ನಿದ್ರಿಸುತ್ತಿದ್ದ ರಾಮುವಿನ ಕನಸಿನಲ್ಲಿ ಅವನ ತಂದೆ ಭಯಂಕರ ರಾಕ್ಷಸರಾಗಿಬಿಟ್ಟಿದ್ದರು! ಆದರೆ, ಪಕ್ಕದಲ್ಲೇ ಇನ್ನೂ ಎಚ್ಚರವಾಗಿ ಮಲಗಿದ್ದ ಕೃಷ್ಣಪ್ಪನವರ ಕೈಗಳು ತನ್ನ ಕುರುಳನ್ನು ನೇವರಿಸುತ್ತಿದ್ದುದನ್ನು ಅವನು ಅರಿಯನು.

× × × ×

ರಾಮು ತಂದ ನಾಯಿಮರಿಗೂ, 'ರಾಮು' ಎಂದೇ ಹೆಸರಾಯಿತು. ಯಾವಾಗಲಾದರೊಮ್ಮೆ 'ರಾಮೂ, ರಾಮೂ' ಎಂದು ನರಸಿಂಗರಾಯರು ಕೂಗಿದರೆ ಸರಿ, ನಾಯಿಯ ಹಿಂದೆ ರಾಮುವೂ ಓಡಿಬರುತ್ತಿದ್ದನು. ನರಸಿಂಗ ರಾಯರಿಗೂ, ಸುಂದರಮ್ಮನವರಿಗೂ ತಡೆಯಲಾಗದ ನಗು.

'ರಾಮು' ಬಹಳ ಸುಂದರವಾಗಿ ಬೆಳೆದಿತ್ತು. 'ಇದು ಒಳ್ಳೇ ಜಾತಿಯ ನಾಯಿ' ಎಂಬ ನರಸಿಂಗರಾಯರ ಖಚಿತವಾದ ಅಭಿಪ್ರಾಯ ಕೇಳಿ ರಾಮುವಿಗೆ ತುಂಬ ಹಿಗ್ಗು, ಹೆಮ್ಮೆ. ವಾಸ್ತವವಾಗಿ ಅವನೇ ನಾಯಿಯ ಒಡೆಯ. ನಾಯಿ

ಮರಿ ಬಂದಂದಿನಿಂದ, ರಾಮು ಹೆಚ್ಚು ಹೊತ್ತನ್ನೆಲ್ಲ ನರಸಿಂಗರಾಯರ ಮನೆ ಯಲ್ಲೇ ಕಳೆಯುತ್ತಿದ್ದನು. ಬೆಳಗ್ಗೆ ಎಲ್ಲರಿಗಿಂತ ಮುಂಚೆ ಎದ್ದು, ರಾಯರ ಮನೆಗೆ ಹೋಗುತ್ತಿದ್ದನು. ಅಲ್ಲಿ ನಿತ್ಯ ಅವನಿಗೆ ಕಾಫಿಯೂ ಗಿಟ್ಟುತ್ತಿತ್ತು.

ಒಂದು ದಿನ, ನಾಯಿಮರಿ – ಮರಿಯೇನು, ಅಕ್ಕರೆಯಿಂದ ಒಂದು ವರ್ಷ ಬೆಳೆಸಿದ ನಾಯಿ – ಕೃಷ್ಣಪ್ಪನವರ ಮನೆಯ ಮುಂದೆ ಸುಮ್ಮನೆ ಬಗುಳುತ್ತ ನಿಂತಿತು. ಅಂದು ರಾಮು ಇನ್ನೂ ಎದ್ದು ಬಂದಿರಲಿಲ್ಲ. ಬಗುಳುವುದು ಕೇಳಿ ರಾಮು ಹೊರಕ್ಕೆ ಬಂದ. ನಾಯಿ ಬಗುಳುತ್ತಲೇ ಮುಂದೆ ಮುಂದೆ ಓಡಿ ಮನೆ ಯೊಳಕ್ಕೆ ಧಾವಿಸಿತು. ರಾಮು ಸಂಗಡ ಹೋದರೂ ನಾಯಿ ಮಾತ್ರ ಬಗುಳು ವುದು ನಿಲ್ಲಿಸಲೇ ಇಲ್ಲ. ಏನೆಂದು ಯಾರಿಗೂ ಅರ್ಥವಾಗಲಿಲ್ಲ. ಕಡೆಗೆ ನಾಯಿ ಮರಿ ಮನೆಯ ಪಕ್ಕದ ಸಣ್ಣ ಗಲ್ಲಿಯಿಂದ ಹಿತ್ತಲಿಗೆ ಓಡಿತು. ರಾಮು ಹಿಂಬಾಲಿಸಿ ಹೋದ. ನಾಯಿ 'ಕನ್ಸರ್ವೆನ್ಸಿ' ಬಾಗಿಲ ಬಳಿ ನಿಂತು ಒಂದೇ ಸಮನೆ ಬಗುಳುತ್ತ ನಿಂತುಕೊಂಡಿತು. ರಾಮುವಿಗೆ ಏನು ಸಂಗತಿ ಎಂದು ಮೊದಲು ಅರ್ಥವಾಗಲಿಲ್ಲ. ಏನೋ ತೋರಿದಂತಾಗಿ, ಚಿಲಕ ಕಳಚಿ ಬಾಗಿಲು ತೆರೆದ. ನಾಯಿ ಹೊರಕ್ಕೆ ಧಾವಿಸಿತು; ಗಲ್ಲಿಯ ಒಂದು ತಿಪ್ಪೆಯ ರಾಶಿಯ ಬಳಿ ಇದ್ದ ಒಂದು ಸಣ್ಣ ಮೂಟೆಯ ಸುತ್ತ ಮೂಸುತ್ತ ಸುಳಿದಾಡತೊಡಗಿತು. ಪಕ್ಕದಲ್ಲೇ ಇದ್ದ ಒಂದೆರಡು ಕಾಗೆಗಳು ಕಾ ಕಾ ಎನ್ನುತ್ತ ದೂರಕ್ಕೆ ಕುಪ್ಪಳಿಸಿ ಹೋದುವು. ಅಲ್ಲಿಯೇ ಇದ್ದ ಇನ್ನೊಂದು ಕಜ್ಜಿ ಹತ್ತಿದ ನಾಯಿ ಗುರ್ ಎಂದಿತು. ರಾಮು ಕಲ್ಲು ತೆಗೆದುಕೊಂಡು ಬೀರಲು, ಅದು ಓಟ ಕಿತ್ತಿತು. ಅವನು ಆ ಸಣ್ಣ ಮೂಟೆಯ ಬಳಿ ಹೋಗಿ, ಬಗ್ಗಿ ನೋಡಿದ. ಗೋಣಿಪಟ್ಟೆ ಯಲ್ಲಿ ಸುತ್ತಿರಿಸಿದ್ದ ಹಸುಳೆಯ ಮುಖ ರಾಮುವಿನ ದೃಷ್ಟಿಗೆ ಬಿದ್ದಿತು.

"ಮಾವಯ್ಯ, ಮಾವಯ್ಯ...ತಿಪ್ಪೆಯ ಬಳಿ ಒಂದು ಮಗು...ಮಗು..." ಎಂದು ಕೂಗಿಕೊಂಡು (ನರಸಿಂಗರಾಯರ) ಮನೆಯೊಳಕ್ಕೆ ಓಡಿದ.

ಆಗತಾನೆ ಸ್ನಾನ ಸಂಧ್ಯಾವಂದನೆ ಮುಗಿಸಿ, ಕಾಫಿಗಾಗಿ ಕಾದು ಕುಳಿತಿದ್ದ ನರಸಿಂಗರಾಯರು 'ಎಲ್ಲೋ, ಎಲ್ಲೋ,' ಎಂದು ಮೇಲೆದ್ದು ರಾಮುವನ್ನು ಹಿಂಬಾಲಿಸಿದರು. ಕಾಫಿ ಸೋಸುತ್ತ ಇದ್ದ ಸುಂದರಮ್ಮನವರೂ ಸೋಸು ವುದನ್ನು ನಿಲ್ಲಿಸಿ ಅವರ ಹಿಂದೆಯೇ ನಡೆದರು. ರಾಮು ಹಿಂತಿರುಗಿ ಹೋಗಿ ತಮ್ಮ ಮನೆಯಲ್ಲೂ ಸುದ್ದಿ ಮುಟ್ಟಿಸಿದ್ದ. ಅವನ ಮನೆಯ ಹಿತ್ತಲ ಕನ್ಸರ್ವೆನ್ಸಿ

ಬಾಗಿಲೂ ತೆರೆಯಿತು. ಕೃಷ್ಣಪ್ಪನವರ ಕುಟುಂಬವೆಲ್ಲ ಅಲ್ಲಿ ಹಾಜರಾಯಿತು. ಕೆಲವು ನಿಮಿಷಗಳಲ್ಲೆ ಕನ್ಸರ್‌ವೆನ್ಸಿ ಗಲ್ಲಿಯಲ್ಲಿ ಗಂಡಸರು, ಮಕ್ಕಳ ಗುಂಪು ಆ ಅನಾಥ ಶಿಶುವಿನ ಸುತ್ತ ನೆರೆಯಿತು. ಹೆಂಗಸರು ಬಾಗಿಲ ಬಳಿಯಲ್ಲೇ ನಿಂತು, ಕತ್ತನ್ನು ಹೊರಕ್ಕೆ ಚಾಚಿ ನೋಡಲು ಹವಣಿಸುತ್ತಿದ್ದರು. ಗುಂಪಿನ ಜನ ಕೆಲವರು ಟೀಕೆಯ ಬಾಣಗಳನ್ನೆಸೆದರು; ಕೆಲವರು ಸಹಾನುಭೂತಿಯ ಕರುಣೆಯ ಮಾತುಗಳನ್ನಾಡಿದರು. ಅಷ್ಟರಿಂದಲೇ ತೃಪ್ತಿಗೊಂಡವರಂತೆ ಮಗುವನ್ನು ನೋಡುತ್ತಾ ನಿಂತಿದ್ದರು.

"ಯಾರೋ ಪಾಪಿ ಮುಂಡೇಮಕ್ಕಳು, ಹೊಲೇಮನೆ ಮಗುವನ್ನು ಬೀದಿಪಾಲು, ನಾಯಿಪಾಲು ಮಾಡಿದ್ದಾರೆ."

"ಹೆರುವುದು ಯಾಕೆ ಹೆರಬೇಕಾಗಿತ್ತೋ, ಈ ಭಾಗ್ಯಕ್ಕೆ."

"ಹೆಣ್ಣೋ, ಗಂಡೋ....?"

"ಅಳುತಾನೂ ಇಲ್ಲ. ಬದುಕಿದೆಯೋ ಸತ್ತಿದೆಯೋ, ಒಂದೂ ಗೊತ್ತಾಗೋದಿಲ್ಲ. ಅಯ್ಯೋ ಪಾಪ!"

"ಅಯ್ಯೋ ಪಾಪ!"

"ಅಯ್ಯೋ ಪಾಪ!"

ಮರುಕದ ಮಾತಿನೊಂದಿಗೆ ಒಬ್ಬಿಬ್ಬರು ಕರುಣೆಯ ಕಂಬನಿಯನ್ನು ಮಿಡಿದರು.

"ಬದುಕಿದೆ ಅಂತ ಕಾಣುತ್ತೆ. ಏನೋ ಅಲುಗಾಡಿದ ಹಾಗಾಗುತ್ತೆ."

"ಬದುಕಿರುವ ಮಗುವನ್ನು ಯಾರು ಬಿಸಾಡುತ್ತಾರೆ. ಎಲ್ಲೋ ಸತ್ತು ಹುಟ್ಟಿರಬೇಕು."

"ಸತ್ತು ಹುಟ್ಟಿದರೆ ತಾನೆ ಬಿಸಾಡಬೇಕೇ ಅಂದ್ರೆ? ಹೀಗೇ ಗತಿ ಕಾಣಿಸುವುದು?...."

"ಮಗು ನನ್ನದು ಅಂತ ಹೇಳಿಕೊಳ್ಳೋದಕ್ಕೆ ಮುಖ ಇಲ್ಲದೆ ಇರೋಳು, ಯಾವಳೋ ಕಲ್ಲೆದೆಯೋಳು ಮಾಡಿರೋ ಕೆಲಸ."

"ಕರುಣೆಯೇ ಇಲ್ಲ ಆ ಮಹಾತಾಯಿಗೆ. ಏನಾದರೂ ಮಾಡಿಕೊಂಡು ಮಗು ಬೆಳೆಯದ ಹಾಗೆ ಮಾಡಿಕೊಳ್ಳಬಹುದಾಗಿತ್ತಲ್ಲಾ?"

"ಎಲ್ಲೋ ಕೈಮೀರಿತು ಅಂತ ಕಾಣುತ್ತೆ."

" ಎಲ್ಲೋ ಸ್ವಲ್ಪ ರಕ್ತ ಸುರಿದಿರೋ ಹಾಗಿದೆಯೇ. ಅಯ್ಯೋ ಪಾಪ."

" ಯಾರಾದರೂ ಬಟ್ಟೆ ಸರಿಸಿ ನೋಡಿದ್ದರೆ ಆಗಿತ್ತು...."

" ಹಾಳಾದ್ದು, ಮುಟ್ಟೋಣ ಅಂದರೆ....ಯಾವ ಜಾತಿಯೋ ಏನು ಕತೆಯೋ."

" ಎಲ್ಲೋ, ಆ ಕಸ ಗುಡಿಸುವ ನರಸೀನೂ ಕಾಣುವುದಿಲ್ಲ...."

ನಾಯಿ ಹಾಯಂತ ಅಲ್ಲಿಯೇ ಮಲಗಿಬಿಟ್ಟಿತು: ಹುಟ್ಟುಸಾವಿನ ತೊಟ್ಟಿಲಗೋರಿಯಲ್ಲಿದ್ದ ಹಸುಳೆಯ ಕಾವಲಾಗಿ. ರಾಮುವಿಗೆ ಏನು ತೋರಿತೋ ಏನೋ, ಮಗುವಿನ ಹತ್ತಿರಕ್ಕೆ ಹೋಗಿ, ಅವರಿವರು ಬೇಡ ಎನ್ನುವುದಕ್ಕೆ ಮೊದಲೇ, ಬಟ್ಟೆ ಸರಿಸಿಬಿಟ್ಟು, ಕೂಗಿದ: " ಬದುಕಿರೋ ಹಾಗೆ ಕಾಣುತ್ತೆ ಮಾವಯ್ಯ! ಕೆಂಪಗಿದೆ ಮುಖ!....ಪಿಳ ಪಿಳ ಅಂತ ಕಣ್ಣು ಬಿಟ್ಟಿದೆ!...."

" ನೀನು ಯಾಕೆ ಮುಟ್ಟುವುದಕ್ಕೆ ಹೋದೆಯೋ ಹಾಳಾದ್ದು " ಎಂದು ಶಾರದಮ್ಮನವರು ಕೂಗಿಕೊಂಡರು. 'ಬಾರೋ ಇಲ್ಲಿ, ಕತ್ತೆ ಭಡವಾ!' ಎಂದು ಕೃಷ್ಣಪ್ಪನವರು ಕಿರಿಚಿಕೊಂಡರು.

" ಈ ಮಗುವಿಗೆ ಯಾರೂ ಗತಿಯಿಲ್ಲವೆ? ಈ ವಿಶಾಲ ಜಗತ್ತಿನಲ್ಲಿ ಈಗ ತಾನೇ ಕಣ್ಣುಬಿಡುತ್ತಿರುವ ಈ ಹಸುಳೆಗೆ ಇಂಬುಕೊಡುವ ಕರುಣೆಯ ತೊಟ್ಟಿಲಿಲ್ಲವೆ?" ಎಂದು ಮರುಗಿ ಕೇಳುವ ರೀತಿಯಲ್ಲಿ, ಮಲಗಿದ್ದ ನಾಯಿ ಅಳುವ ದನಿಯಲ್ಲಿ ಕೂಗಿತು.

" ಮಗು ಸತ್ತಿರಬೇಕು ಅಂದ್ರೆ. ಇಲ್ಲದಿದ್ದರೆ ನಾಯಿ ಹಾಗೆ ಅಳುವುದಿಲ್ಲ."

" ನರಸೀ!....ನರಸೀ!!....ನರಸೀ!!!"

" ದೂರದಲ್ಲಿ, ಕಸ ಗುಡಿಸಲು ಆಗತಾನೇ ಪೊರಕೆ ಆಡಿಸತೊಡಗಿದ್ದ ನರಸಿ ಕರೆಕೂಗು ಕೇಳಿ ಬೇಗ ಬೇಗನೇ ಬಂದಳು.

ಮಾದಿಗರ ನರಸಿಗೆ ಎಲ್ಲರೂ ದಾರಿ ಮಾಡಿಕೊಟ್ಟು ದೂರ ಸರಿದರು.

ಹೆಚ್ಚಿನ ವಿವರಣೆಯೇ ಬೇಕಿರಲಿಲ್ಲ. ಅವಳು ನಿಶ್ಚಿಂತೆಯಾಗಿ ಹಸುಳೆಯನ್ನು ಹೂವಿನಂತೆ ಎತ್ತಿಕೊಂಡು ತನ್ನ ಮಡಿಲಿನಲ್ಲಿ ಮಲಗಿಸಿಕೊಂಡಳು.

ನಾಯಿ ಎದ್ದು, ಬಾಲ ಅಲ್ಲಾಡಿಸುತ್ತ, ಸಂತಸಗೊಂಡಂತೆ ಸಹಜ ರೀತಿಯಲ್ಲಿ ಬಗುಳುತ್ತ, ಅವಳ ಸುತ್ತ ಸುತ್ತಾಡತೊಡಗಿತು.

" ಬಂಗಾರ ಬಿಡ್ಡ, ಬಂಗಾರ ಬಿಡ್ಡ !"

"ಸತ್ತಿದೆಯೇನೇ ?"

"ಇಲ್ಲ ಬುದ್ದೀ....ಬ್ರಾಂಬರ ಕೂಸಿನ ಹಂಗೇ ಕಾಣಿಸ್ತದೆ....ನಾನು ಹೆಂಗೆ ಸಾಕಿಕೊಳ್ಳಲಿ."

"ನೀವು ಸಾಕಿಕೊಂಡುಬಿಡಿ, ಮಾವಯ್ಯ. ಬೀದೀಲಿ ಬಿದ್ದಿದ್ದ ನಾಯಿ ಮರಿ ಸಾಕಿಕೊಳ್ಳಲಿಲ್ಲವೆ, ಹಾಗೆ ನನ್ನೇ ಸಾಕಿಕೊಂಡುಬಿಡುತೀನಿ ಅನ್ನಲಿಲ್ಲವೆ, ಹಾಗೆ."

ರಾಮುವಿನ ಹೃದಯ ಯಾರಿಗೂ ಅರ್ಥವಾಗಲಿಲ್ಲ. ಎಲ್ಲರೂ ಗೊಳ್ಳನೆ ನಕ್ಕರು.

"ಬನ್ನೀ ಅಂದ್ರೆ, ಸ್ನಾನಕ್ಕೆ ನೀರು ತೋಡಿದೆ, ಆರಿಹೋಗುತ್ತೆ...." ಸುಂದರಮ್ಮನವರು ಕೂಗಿ ಕರೆದರು.

ನರಸಿಂಗರಾಯರು ಒಳಕ್ಕೆ ನಡೆದರು.

ನರಸಿ ಹಸುಳೆಯೊಂದಿಗೆ ಮೆಲ್ಲಗೆ ನಡೆದುಹೋದಳು. ನಾಯಿ ಬಾಲ ಅಲ್ಲಾಡಿಸುತ್ತ ಅವಳನ್ನು ಹಿಂಬಾಲಿಸಿತು.

"ರಾಮೂ, ರಾಮೂ," – ತನ್ನ ನಾಯಿಯನ್ನು ರಾಮು ಕೂಗಿ ಕರೆದ. ಅದು ಬರಲೇ ಇಲ್ಲ.

"ರಾಮೂ, ಸ್ನಾನ ಮಾಡುವೆಯಂತೆ, ಬಾ" – ಶಾರದಮ್ಮನವರು ಕರೆದರು. ಒಳಕ್ಕೆ ಹೋದರು. ಒಡನೆಯೇ ರಾಮು ಹೋಗಲಿಲ್ಲ.

ಗಲ್ಲಿ ಮತ್ತೆ ನಿರ್ಜನವಾಯಿತು. ರಾಮು ಒಬ್ಬನೇ ನಿಂತಿದ್ದ. ಅಲ್ಲಿ, ದೂರದಲ್ಲಿ, ನರಸಿಯ ಕಸದ ಗೂಡೆ, ಪೊರಕೆ ಅವಳ ಹೀನವೃತ್ತಿಯ ಸಂಕೇತ ಗಳಾಗಿ ಮೌನವಾಗಿ ನೆಲಸಿದ್ದವು. ಬೀದಿಯ ಜನರ ಕಲ್ಮಶ ತುಂಬಿಕೊಳ್ಳಲು ಸಿದ್ಧವಾಗಿದ್ದವು.

ಕಸ ಗುಡಿಸುವ, ಮಲ ಎತ್ತುವ, ಕೊಳೆ ಮೈಯ ನರಸಿಯ ಹೃದಯದಲ್ಲಿ ಕಸ ತುಂಬಿರಲಿಲ್ಲ. ಅದು ನಿರ್ಮಲವಾಗಿತ್ತು. ಆ ಹೃದಯಕ್ಕೆ ಅವಚಿಕೊಂಡು, ಹಸುಳೆಯನ್ನು ಎತ್ತಿಕೊಂಡು ಹೋದಳು. ಎದೆಯ ಸೋಕು ತಣ್ಣಗಾಗುತ್ತಿದ್ದ ಹಸುಳೆಗೆ ಶಾಖ ಕೊಡತೊಡಗಿತ್ತು.

ರಾಮು ನಿಂತೇ ಇದ್ದ. ಮೂಕ ಕರುಣೆಗೆ ನುಡಿಗೊಡಲು, ಕಾರ್ಯದ ರೂಪ ಕೊಡಲು, ಅವನು ಸಮರ್ಥನಾಗಿರಲಿಲ್ಲ. ಈ ರಾಮುವಿನ ಪ್ರತಿನಿಧಿ

ಯಾಗಿ ಆ 'ರಾಮು' ಹೊಸ ತಾಯಿಯೊಂದಿಗಿದ್ದ ಹಸುಳೆಯನ್ನು ಹಿಂಬಾಲಿ ಸುತ್ತಿತ್ತು.

"ಹಸುಳೆಯನ್ನು ಸಾಗಕಳುಹಿಸಲು ಹೋಗಿದೆ, ಹಿಂದಿರುಗಿ ಬರುತ್ತದೆ" ಎಂಬ ಅಸ್ಪಷ್ಟವಾದ ಅರಿವಿನಿಂದ ಉಂಟಾದ ಸಮಾಧಾನ ತಳೆದು, ರಾಮು ನರಸಿಂಗರಾಯರ ಮನೆಯೊಳಕ್ಕೆ ನಡೆದ.

ಜೊತೆಯಲ್ಲಿ ಬಂದ ನಾಯಿ ಈಗ ಜೊತೆಯಲ್ಲಿ ಇಲ್ಲ....ತಾನು ನಾಯಿ ಮರಿಯನ್ನು ತಂದದ್ದು; ರಾಯರು ಅದನ್ನು ಕರುಣೆಯಿಂದ ಸಾಕಿಕೊಂಡದ್ದು – ಎಲ್ಲವೂ ಅವನ ನೆನಪಿಗೆ ಬಂದುವು.

ನಿರ್ಜನವಾದ ಕನ್ಸರ್ವೆನ್ಸಿ ಗಲ್ಲಿಯಲ್ಲಿ ನರಸಿಯ ಕುಕ್ಕೆ, ಪೊರಕೆ – ಅಂದಿನ ಘಟನೆಯನ್ನು ಮೌನವಾಗಿ ಘೋಷಿಸುತ್ತಿದ್ದುವು.

---

# ಪ್ರಣಯ ಗೀತ

ಅಂದು ಕಚೇರಿಯಲ್ಲಿ ಬಹಳ ಒತ್ತಡದ ಕೆಲಸ. ಫೈಲುಗಳನ್ನು ಮಗುಚಿ ಹಾಕಿದ್ದೂ ಹಾಕಿದ್ದೆ, 'ಕೇಸು'ಗಳನ್ನು ಪರಿಶೀಲಿಸಿ ಟಿಪ್ಪಣಿಗಳನ್ನು ಬರೆದದ್ದೂ ಬರೆದದ್ದೆ. ನನ್ನ ಇಲಾಖೆಯಲ್ಲಿ ನನ್ನ ಸಹೋದ್ಯೋಗಿಗಳು ಇನ್ನು ಮೂವರು ಇದ್ದರೂ ಬಹು ನಾಜೂಕಿನ ಕೆಲಸದವರು. ಪ್ರಾಮಾಣಿಕವಾದ ಕತ್ತೆಯ ಮೇಲೆ ಯಾವಾಗಲೂ ಹೊರೆ ಹೆಚ್ಚು.

ಈ ಅನುಭವ ನನಗೆ ಹೊಸದೇನಲ್ಲ; ಅಭ್ಯಾಸವಾಗಿಹೋಗಿತ್ತು. ಅಲ್ಲದೆ ಕಚೇರಿಯ ಬೇಸರಿಕೆಯನ್ನು ನಾನು ಮನೆಗೆ ಹೊತ್ತು ತರುತ್ತಿರಲಿಲ್ಲ; ಕಚೇರಿಯ ಫೈಲುಗಳೊಂದಿಗೇ ಕಟ್ಟಿಟ್ಟು ಬರುತ್ತಿದೆ. ಅಲ್ಪಸ್ವಲ್ಪ ಆಯಾಸ ತೋರಿದರೂ, ಮನೆಗೆ ಬಂದಕೂಡಲೆ ಮಡದಿಯ ಉಪಚಾರ (ಬಿಸಿಬಿಸಿಯಾಗಿ ಮಾಡಿಟ್ಟಿರುತ್ತಿದ್ದ ತಿಂಡಿ ಕಾಫಿ), ಅವಳ ಸರಸ ಸಲ್ಲಾಪ, ಎಲ್ಲಕ್ಕಿಂತ ಹೆಚ್ಚಾಗಿ ಒಲವಿನ ಜೇನು ತೊಟ್ಟಿಕ್ಕುತ್ತಿದ್ದ ಅವಳ ಚೆಂದುಟಿಯ ಮಂದಹಾಸ, ಒಲವಿನ ಬೆಳಕನ್ನು ಬೀರುತ್ತಿದ್ದ ಅವಳ ವಿಶಾಲ ನೇತ್ರಗಳ ಕಮನೀಯ ಕಟಾಕ್ಷ– ಇವು ನನ್ನ ಬೇಸರ ಬಳಲಿಕೆಗಳನ್ನೆಲ್ಲಾ ಒಂದು ಕ್ಷಣದಲ್ಲಿ ನೀಗಿ ಮಾರನೆಯ ದಿನದ ದುಡಿತಕ್ಕೆ ನನ್ನನ್ನು ಹೊಸ ಮನುಷ್ಯನನ್ನಾಗಿ ಮಾಡುತ್ತಿದ್ದುವು.

ಅಂದು ಎಂದಿಗಿಂತ ಹೆಚ್ಚು ಬೇಸರ ಬಳಲಿಕೆಗಳು ತಲೆದೋರಿದ್ದುವು. ಹಾಗೆಯೇ ದಾರಿಯಲ್ಲಿ ಬರುತ್ತ 'ಆನಂದ ಭವನ'ಕ್ಕೆ ನುಗ್ಗಿ ಹೋಗೋಣವೇ ಎನ್ನಿಸಿತು. ಆದರೆ ನನ್ನ ಚಪಲವನ್ನು ಬಹಳ ಕಷ್ಟಪಟ್ಟು ತಡೆದುಕೊಂಡೆ. ಹೆಂಡತಿ ಕಷ್ಟಪಟ್ಟು ಮಾಡಿಟ್ಟ ಉಪಾಹಾರವನ್ನು ಬೇಡವೆನ್ನುವುದಾಗಲಿ ಬೇಸರದಿಂದ ಸ್ವೀಕರಿಸುವುದಾಗಲಿ ಮಹಾ ದ್ರೋಹವೆಂದು ಭಾವಿಸಿದ್ದೆ. ಅಷ್ಟೊಂದು 'ಪತ್ನೀವ್ರತ' ನಿಷ್ಠನಾಗಿದ್ದೆ ಆಗ.

'ಆನಂದ ಭವನ'ದ ಆಲೋಚನೆ ಬಿಟ್ಟಕೂಡಲೆ, ಸೈಕಲಿನ ವೇಗವನ್ನು ಜೋರುಮಾಡಿದೆ. ಹತ್ತು ನಿಮಿಷಗಳಲ್ಲಿ ಮನೆ ಸೇರಿದೆ. ಎಂದಿನಂತೆ ಉಡುಪು ಕಳಚಿ, ಕೈಕಾಲು ಮುಖ ತೊಳೆದುಕೊಂಡು, ಸುಖಾಸೀನನಾಗಿ ಕಾಲುಚಾಚಿ ಕುಳಿತೆ.

ನಿತ್ಯ ನಾನು ಕುರ್ಚಿಯ ಮೇಲೆ ಕುಳಿತುಕೊಳ್ಳುವುದಕ್ಕೂ, ಸರೋಜ ತಿಂಡಿಯ ತಟ್ಟೆ ಹಿಡಿದು ಬಳುಕುತ್ತ ಬರುವುದಕ್ಕೂ ಮೇಳವಾಗುತ್ತಿತ್ತು. ಇಂದು ಕುಳಿತು ಐದು ನಿಮಿಷಗಳಾದರೂ ಅವಳ ಸುಳಿವೇ ಇರಲಿಲ್ಲ. ಸಾಧ್ಯವಾದರೆ ಆ ಹೊತ್ತು ಅವಳೊಂದಿಗೆ ಮಿನರ್ವ ಟಾಕೀಸಿಗೋ ಲಾಲ್‌ಬಾಗಿಗೋ ಹೋಗೋಣವೆಂದು ಬೇರೆ ಎಣಿಸಿದ್ದೆ.

ಆಗಲೇ ಐದೂಮುಕ್ಕಾಲಾಗಿತ್ತು ಹೊತ್ತು ಮೀರೀತೆಂದು, "ಸರೂ" ಎಂದು ಕೂಗಿದೆ. ಉತ್ತರ ಬರಲಿಲ್ಲ. ಮತ್ತೆ ಕೂಗಿದೆ. ಉತ್ತರವಿಲ್ಲ. ಎದ್ದು ಅಡಿಗೆ ಮನೆಗೆ ಹೋದೆ; ಇಲ್ಲಿ ಇರಲಿಲ್ಲ. ಮಲಗುವ ಕೋಣೆಗೆ ಹೋದೆ; ಅಲ್ಲಿ ಚಾಪೆಯ ಮೇಲೆ ಮುಖವಡಿಯಾಗಿ ಮಲಗಿದ್ದಳು. ರಾಮನಿಗೆ ರಾಜ್ಯಾಭಿಷೇಕವಾಗುತ್ತದೆಯೆಂಬ ವೃತ್ತಾಂತವನ್ನು ಕೇಳಿ, ಭರತನಿಗೆ ರಾಜ್ಯವನ್ನು ಬಯಸಿ, ದಶರಥನ ಮನವೊಲಿಸಿಕೊಳ್ಳಲು ಕೋಪಾಗಾರಕ್ಕೆ ಹೋಗಿ ಮಲಗಿದ್ದ ಕೈಕೆಯ ಚಿತ್ರದ ನೆನಪಾಯಿತು ನನಗೆ.

"ಸರೂ, ಮೈಗೆ ಸರಿಯಾಗಿಲ್ಲವೆ ?"

ಮಾತಿಲ್ಲ. ನನಗೆ ಬೆರಗಾಯಿತು, ಭ್ರಮೆಯಾಯಿತು, ಭಯವಾಯಿತು.

ಮತ್ತೆ ಮೆಲ್ಲನೆ "ಸರೂ – ಊ" ಎಂದೆ; ತಲೆಯ ಮೇಲೆ ಕೈಯಿಟ್ಟೆ. ಇಟ್ಟ ಕೈಯನ್ನು ಕಿತ್ತು ಕೊಡವಿದಳು. ಅಬಲೆ ಕೆರಳಿದರೆ ಎಂಥ ಸಬಲೆಯೆಂಬುದರ ಅರಿವು ಮೊದಲು ಉಂಟಾಯಿತು. ಅವಳ ಚರ್ಯೆ ನನಗೆ ಅರ್ಥವಾಗಲಿಲ್ಲ.

"ತುಂಬ ಹೊಟ್ಟೆ ಹಸಿಯುತ್ತ ಇದೆ ಕಣೇ. ಏನಾದರೂ ಕೊಡುತ್ತೀಯೋ....ಇಲ್ಲ ಮಾಡೇ ಇಲ್ಲವೋ...."

"ಬೇಕಾದರೆ ಹೋಟೆಲಿಗೆ ಹೋಗಿ. ಗಂಡಸರಿಗೇನು, ಹೊಟ್ಟೆ ಹಸಿದರೆ ಹೋಟಲು, ಮನೆ ಬೇಸರವಾದರೆ ಸಿನಿಮಾ, ಹೆಂಡತಿ ಬೇಸರವಾದರೆ...." ಎಂದು ಬಿಕ್ಕಿ ಬಿಕ್ಕಿ ಅಳತೊಡಗಿದಳು.

"ಅನಾವಶ್ಯಕವಾಗಿ ನಾನು ಎಂದೂ ಹೋಟೆಲಿಗೇ ಹೋಗಿಲ್ಲವಲ್ಲೇ. ನಿನ್ನ ಬಿಟ್ಟು ಎಂದು ಒಬ್ಬನೇ ಸಿನಿಮಾಕ್ಕೆ ಹೋಗಿದೀನಿ ? ಅದಿರಲಿ, ಏನಾದರೂ ತಿಂಡಿ ಮಾಡಿದ್ದೀಯೋ ಇಲ್ಲ...."

"ನಾನು ಮಾಡಿದ ತಿಂಡಿ ನಿಮಗೆ ರುಚಿಸುತ್ತದೆಯೇ? ಬೇರೆ ಯಾರ ಕೈಲಾದರೂ ಮಾಡಿಸಿಕೊಳ್ಳಿ."

ಅವಳಿಗೆ ವೈಗೆ ಸರಿಯಾಗಿಯೇ ಇದೆ, ಆದರೆ ನನ್ನಿಂದ ಏನೋ ಅಪಚಾರ ವಾಗಿದೆ ಎಂದು ತೋರಲು ಹೆಚ್ಚು ಹೊತ್ತು ಹಿಡಿಯಲಿಲ್ಲ.

"ನನ್ನ ಮೇಲೆ ನಿಷ್ಕಾರಣವಾಗಿ ನಿನಗೆ ಕೋಪ ಉಂಟಾಗಿದೆ. ಅಥವಾ ಕಾರಣ ಇದ್ದರೂ ಇರಬಹುದು. ಏನೆಂದು ಹೇಳಿದರೆ, ತಪ್ಪಿದ್ದರೆ ಒಪ್ಪಿ ಕೊಳ್ಳುತ್ತೇನೆ. ಯಾವುದೋ ಅಲ್ಪಕ್ಕೆ ಇಷ್ಟು ಕೋಪ ಯಾಕೆ? ಲಾಲ್‌ಬಾಗಿಗೆ ಹೋಗೋಣ ಏಳು. ತಂಗಾಳಿಯಲ್ಲಿ ಸ್ವಲ್ಪ ತಿರುಗಾಡಿದರೆ ಎಲ್ಲ ಸರಿಹೋಗುತ್ತೆ. ಅಲ್ಲೇ ಇಬ್ಬರೂ ತಿಂಡಿ ಕಾಫಿ ತೆಗೆದುಕೊಳ್ಳೋಣ...."

"ಲಾಲ್‌ಬಾಗಿಗೆ! ನನ್ನ ಜೊತೆಯಲ್ಲಿ! ಕಮಲೆಯನ್ನು ಮರೆತು ಬಿಟ್ಟಿರೋ ಹೇಗೆ?"

"ಯಾವ ಕಮಲೆಯೋ?"

"ಅಲ್ಲ, ನನ್ನನ್ನೇ ಕೇಳುತ್ತೀರ? ಅಥವಾ ಅವಳನ್ನೂ ಮರೆತು ವಿಮಲೆಯ ಸಂಗ ಮಾಡಿದ್ದಿರೋ ಏನೋ, ಯಾರಿಗೆ ಗೊತ್ತು?"

ಸರೂವಿನ ಮಾತೊಂದೂ ನನಗೆ ಅರ್ಥವಾಗಲಿಲ್ಲ. ಅವಳಿಗೆಲ್ಲೋ ಬುದ್ಧಿಭ್ರಮಣೆಯಾಗಿರಬೇಕೆಂದು ತೋರಿತು. ಆದರೆ ಅವಳ ಮುಖದಲ್ಲಿ ಅಚ್ಚೊತ್ತಿದ್ದ ಈರ್ಷ್ಯಾಮೂಲವಾದ ಕ್ರೋಧದ ಮುದ್ರೆಯನ್ನು ನೋಡಿದರೆ ಬುದ್ಧಿಭ್ರಮಣೆ ಎಂಬ ಅನುಮಾನಕ್ಕೆ ಎಡೆಯಿರಲಿಲ್ಲ. ನನ್ನ ಪರಿಚಯದ ಕಮಲೆ ಎಂಬ ಹೆಸರಿನ ಮದುವೆಯಾದ ಮದುವೆಯಾಗದ ತರುಣಿಯರು ಯಾರು ಯಾರು ಇದ್ದಾರೆ ಎಂಬುದನ್ನು ಮನಸ್ಸಿನಲ್ಲೇ ಝಡತಿ ಹಾಕಿದೆ. ನನ್ನ ದೊಡ್ಡಪ್ಪನ ಮಗಳು, ಮಗುವಿನ ತಾಯಿ, ನೆನಪಿಗೆ ಬಂದಳು. ಮಗು ವಾಗುವ ಮುನ್ನ ಎಂದೋ ಒಮ್ಮೆ ನನ್ನ ಮನೆಗೆ ಬಂದಿದ್ದಳು. ಸರೂ ಶಂಕಿಸು ತ್ತಿರುವಂತಹ ಪ್ರೇಮವನ್ನು ಸೋದರ ಸಂಬಂಧದ ತರುಣಿಯಲ್ಲಿ ತೋರುವುದು ಅಚಿಂತ್ಯ ಎಂಬುದು ಅವಳಿಗೂ (ಸರೂವಿಗೂ) ಮನಗಾಣದೆ ಇರದು. ಹೀಗಿರುವಲ್ಲಿ, ಅವಳ ಈರ್ಷ್ಯೆಗೆ ಕಾರಣಳಾದ ಆ ಕಮಲೆ ಯಾರು? ನನಗೆ ಬಗೆಹರಿಯಲಿಲ್ಲ.

"ನೀನು ಸುಮ್ಮನೆ ಇಲ್ಲದ್ದನ್ನು ಕಲ್ಪಿಸಿಕೊಂಡು ನೀನೂ ಅನಾವಶ್ಯಕ

ವಾಗಿ ದುಃಖಪಡುತ್ತ ಇದ್ದೀಯೆ, ನನ್ನನ್ನೂ ದುಃಖಕ್ಕೆ ಗುರಿಮಾಡುತ್ತ ಇದ್ದೀಯೆ."

"ಹೌದು. ನಾನು ಬದುಕಿರುವುದೇ ನಿಮಗೆ ದುಃಖ. ಸಾಯದೆ ಬದುಕಿದ್ದೇನಲ್ಲಾ ಅಂತ ನನಗೂ ದುಃಖ. ನಾನು ಸತ್ತರೆ ಇಬ್ಬರಿಗೂ ಸುಖ."

ಸರೂ ಮಲಗಿದ್ದವಳು ವಾದಿಸಲು ಸಿದ್ಧಳಾಗಿ ಕುಳಿತಿದ್ದಳು. ಪ್ರಶಾಂತ ವಾದ ತಿಳಿಗೊಳಕ್ಕೆ ಬಂಡೆಯೊಂದನ್ನು ಎತ್ತಿಹಾಕಿದಂತಿತ್ತು ಅವಳ ಮನಸ್ಸು; ಅವಳ ಕದಡಿದ ಮನಸ್ಸು ಮುಖದಲ್ಲಿ ಸ್ಪಷ್ಟವಾಗಿ ಪ್ರತಿಬಿಂಬಿತವಾಗಿತ್ತು. ಅವಳ ಮುಖದ ಚಂದ್ರಬಿಂಬ ನಡುಹಗಲ ಸೂರ್ಯಬಿಂಬವಾಗಿತ್ತು; ನನ್ನ ದೃಷ್ಟಿಯನ್ನು ಚುಚ್ಚುತ್ತಿತ್ತು. ವಿಧಿ ಅವಳ ಚಿತ್ತಸರಸ್ಸಿಗೆ ಎತ್ತಿಹಾಕಿದ್ದ ಆ ಬಂಡೆ ಯಾವುದೋ ನನ್ನ ಊಹೆಗೆ ಮೀರಿದ್ದಾಗಿತ್ತು.

ವಾಸ್ತವವಾಗಿ ಅದು ಅಂತಹ ಬಂಡೆಯಂತಹ ಭಾರವಾದ ವಸ್ತುವಾಗಿರ ಲಿಲ್ಲ; ಕೇವಲ ಒಂದು ಕಾಗದದ ಚೂರು! "ನಿನಗೆ ನಿಜವಾಗಿಯೂ ಅಂತಹ ಸಂಶಯವಿದ್ದರೆ ಆ ಕಮಲೆ ಯಾರು ಹೇಳು. ತಪ್ಪಾಗಿ ನಡೆದಿದ್ದರೆ ತಿದ್ದಿ ಕೊಳ್ಳುತ್ತೇನೆ" ಎಂದು ಮೃದುವಾಗಿ ಹೇಳಿದಾಗ, ಸರೂ ಆ ಕಾಗದದ ಹಾಳೆಯನ್ನು ಮಡಿಲಿನಿಂದ ತೆಗೆದು ನನ್ನ ಕಡೆಗೆ ಎಸೆದಳು.

ಕಾಲುಗಜ ಕಾಗದದಂತಹ ಹಗುರವಾದ ವಸ್ತು ಅವಳ ಮನಸ್ಸಿಗೆ ಅಷ್ಟು ಭಾರವಾಗಿ ಪರಿಣಮಿಸಿದ್ದನ್ನು ಕಂಡು ನನಗೆ ಆಶ್ಚರ್ಯವಾಯಿತು. ವಾಸ್ತವ ವಾಗಿ ಅವಳ ಮನಸ್ಸಿಗೆ ಭಾರವಾಗಿದ್ದದ್ದು ಆ ಕಾಗದದ ಹಾಳೆಯಲ್ಲ; ಅದರಲ್ಲಿ ಬರೆದಿದ್ದ ವಿಷಯ.

ಮುದುಡಿದ ಕಾಗದವನ್ನು ಬಿಚ್ಚಿ ನೋಡಿದೆ; ದಿಗಿಲಿನಿಂದ ಬಿಚ್ಚಿ ನೋಡಿದೆ; ಇದು ಯಾವ ಪ್ರಣಯಪತ್ರ, ನಾನು ಯಾರಿಗೆ ಎಂದು ಬರೆದಿದ್ದೆ ?— ಎಂಬ ಆತಂಕದಿಂದ ಬಿಚ್ಚಿ ನೋಡಿದೆ. ಪ್ರಣಯಪತ್ರವಾಗಿರಲಿಲ್ಲ; ಪ್ರಣಯ ಗೀತೆಯಾಗಿತ್ತು ಅದು.

ಮುಗ್ಧ ಮನಸ್ಸನ್ನು ಖೇದಗೊಳಿಸಲು ಪ್ರಣಯಪತ್ರವಾದರೇನು, ಪ್ರಣಯಗೀತೆಯಾದರೇನು ? ನನಗೆ ಆಶ್ಚರ್ಯ, ದುಃಖ, ಆತಂಕ, ಸಂತೋಷ ಇವು ಏಕಕಾಲದಲ್ಲಿ ಉಂಟಾದವು. ನಿಷ್ಕಳಂಕ ಪ್ರೇಮವುಳ್ಳ ಗಂಡಹೆಂಡಿರ ನಡುವೆ ತಾತ್ಕಾಲಿಕವಾದರೂ ತೀವ್ರವಾದ ಸಂಶಯಭಾವದ ಗೋಡೆಯನ್ನು

ಎಬ್ಬಿಸಲು ಅದು ವಿಧಿಗೆ ಸಾಮಗ್ರಿಯಾಯಿತೇ ಎಂದು ಆಶ್ಚರ್ಯ; ಸರಳ ಮನಸ್ಸಿನ ಸರೂವಿಗೆ ದುಃಖವೊದಗಿಸಿತಲ್ಲಾ ನಾನು ಎಂದೋ ಗೀಚಿದ ಪ್ರಣಯಗೀತೆ ಎಂದು ದುಃಖ; ಸಂಶಯವನ್ನು ಹೇಗೆ ನಿವಾರಿಸುವುದು ಎಂಬ ಆತಂಕ; ಛಂದೋದೋಷಗಳೂ ಅನನ್ವಯಗಳೂ ಅಪಶಬ್ದಗಳೂ ಅಪಕ್ವ ಅನುಭವವೂ ಅಪ್ರಾಮಾಣಿಕತೆಯೂ ತುಂಬಿ ತುಳುಕುತ್ತಿವೆಯೆಂದು ನನ್ನ ಕವಿಮಿತ್ರರೊಬ್ಬರು ಅಭಿಪ್ರಾಯಪಟ್ಟಿದ್ದ ಯಃಕಶ್ಚಿತ ಕವನವನ್ನು ಅರ್ಥಮಾಡಿಕೊಂಡು ಆನಂದವಲ್ಲ ದಿದ್ದರೆ ದುಃಖವನ್ನಾದರೂ ಪಡುವಂತಾಗಿ, ನಾನು ಬರೆದ ಕವನ ಸಾರ್ಥಕ ವಾಯಿತಲ್ಲಾ ಎಂದು ಸಂತೋಷ. ಕ್ಷಣ ಹೊತ್ತು ಈ ವಿಚಿತ್ರ ಪ್ರಸಂಗವು ಒದಗಿಸಿದ್ದ ವಿನೋದದಲ್ಲಿ ತೇಲಾಡಿದೆ. ಆದರೆ ಆ ವಿನೋಧಭಾವ ಬೇಗ ಮಾಯವಾಯಿತು – ನನ್ನಲ್ಲಿ ಮೂಡಿದ ಒಂದು ಮೆಲುನಗೆಯೊಂದಿಗೆ. ಮತ್ತೆ ಮನಸ್ಸನ್ನು ಚಿಂತೆ ಕವಿಯಿತು. ಮಡದಿಯ ಮನಸ್ಸಿನ ಸಂಶಯವನ್ನು ಹೇಗೆ ಹೋಗಲಾಡಿಸುವುದು ಎಂದು ಪೇಚಾಡಿದೆ.

ಸರೂವಿಗೆ ಕವನವನ್ನು ವಿವರಿಸಿ ಹೇಳಿದೆ, ವ್ಯಾಖ್ಯಾನಮಾಡಿ ತೋರಿಸಿದೆ; ಕವನದಲ್ಲಿ ಕುರಿತ ವ್ಯಕ್ತಿ ಕೇವಲ ಕಾಲ್ಪನಿಕವೆಂದು ಪ್ರಸ್ಥಾಪನೆ ಮಾಡಲು ಹೆಣಗಿದೆ; ಪ್ರಸನ್ನಳಾಗೆಂದು ಬೇಡಿಕೊಂಡೆ, ನನ್ನ ನಿಷ್ಕಳಂಕ ಪ್ರೇಮದ ಭರವಸೆ ನೀಡಿದೆ. ನನ್ನ ಪ್ರಯತ್ನವೆಲ್ಲ ವ್ಯರ್ಥವಾಯಿತು. ಅವಳ ಕಂಬನಿಯ ಕೋಡಿ ಯನ್ನು ನಿಲ್ಲಿಸಲಾಗಲಿಲ್ಲ.

× × × ×

ದಾಂಪತ್ಯ ಪ್ರೇಮದ ಸರೋವರದಲ್ಲಿ ಉಲ್ಲಕಲ್ಲೋಲವೆಬ್ಬಿಸಿದ ಆ ಕವನ ವನ್ನು ಓದುವ ಕುತೂಹಲ ನಿಮಗಿದೆಯೆಂಬುದನ್ನು ನಾನು ಬಲ್ಲೆ. ನನ್ನ ಕವಿ ಮಿತ್ರನ ಸಲಹೆಗೆ ಮನ್ನಣೆಕೊಟ್ಟು ಅಂದು ಪ್ರಕಟಿಸದೆ ಮೂಲೆಯಲ್ಲಿ ಬಿಸುಟಿದ್ದ ಕವನವನ್ನು ಇಲ್ಲಿ ಏಕೆ ಪ್ರಕಟಿಸಲಿ? ಅದನ್ನು ಪ್ರಕಟಿಸಿದರೆ ಆಧುನಿಕ ಕನ್ನಡ ಕವಿತೆಗೆ ಅಪಚಾರ ಮಾಡಿದಂತೆ. ಆದ್ದರಿಂದ ಅದನ್ನು ಇಲ್ಲಿ ಪ್ರಕಟಿಸುವುದಿಲ್ಲ. ಅಲ್ಲದೆ, ಆ ಕವನವನ್ನು ಆ ಮೇಲೆ ಸರೂವಿನ ತೃಪ್ತ್ಯರ್ಥವಾಗಿ ಅವಳೆದುರಿಗೆ ಸುಟ್ಟೆ. ಆ ಕವನದ ನೆನಪೂ ನನಗೆ ಈಗ ಇಲ್ಲ. ಈಗ ನನಗೆ ತಕ್ಕಮಟ್ಟಿಗೆ ಪದ್ಯಕಟ್ಟುವ ಕಲೆ ಸ್ವಾಧೀನವಾಗಿದೆ; ನನ್ನ ಮತ್ತು ಸರೂವಿನ ನಿಷ್ಕಳಂಕವಾದ

ಸರಳವಾದ ದಾಂಪತ್ಯ ಪ್ರೇಮವನ್ನು ಕುರಿತ ಪ್ರಣಯ ಗೀತೆಗಳನ್ನು ರಚಿಸ ಬೇಕೆಂಬ ಹಂಬಲು ಮೂಡಿದೆ. (ನಿಜ ಹೇಳುವುದಾದರೆ, ಕೆಲವನ್ನು ಬರೆದೂ ಇದ್ದೇನೆ!) ಆದ್ದರಿಂದ ಆ ವಿಕೃತಿಯನ್ನು ನಿಮ್ಮ ಮುಂದೆ ಏಕೆ ಪುನಃ ಸೃಷ್ಟಿಸಿ ನಿಮಗೆ ಅಸಂತೋಷವನ್ನು ಉಂಟುಮಾಡಲಿ?

× × × ×

ಐದಾರು ದಿನ ಮನಸ್ತಾಪದಲ್ಲೇ ಕಳೆಯಿತು. ಸರೂವಿನ ಮನಸ್ಸು ಪ್ರಸನ್ನವಾಗಲಿಲ್ಲ. ಕವಿಮಿತ್ರನ ನೆರವು ಪಡೆದರೆ ಎಲ್ಲ ಸರಿಹೋಗಬಹುದೆಂದು ಒಂದು ದಿನ ಅವನನ್ನು ಮನೆಗೆ ಕರೆದುಕೊಂಡು ಬಂದೆ.

ಮನೆಗೆ ಕರೆದುಕೊಂಡು ಬರುವಾಗ ದಾರಿಯಲ್ಲಿ ಅವನಿಗೆ ಎಲ್ಲವನ್ನೂ ವಿವರಿಸಿದ್ದೆ; ಅವನೇ ಕೀಳಾದುದೆಂದು ಅಭಿಪ್ರಾಯಪಟ್ಟಿದ್ದ ಆ ಅನಿಷ್ಟ ಪ್ರಣಯಗೀತೆಯನ್ನೂ ಅವನಿಗೆ ತೋರಿಸಿದ್ದೆ; ಹೇಗಾದರೂ ಮಾಡಿ ಸಂಧಾನ ವನ್ನು ಯಶಸ್ವಿಯಾಗಿ ಮಾಡಬೇಕೆಂದು ಅವನನ್ನು ಬೇಡಿಕೊಂಡಿದ್ದೆ. ತನ್ನ ಕೈಲಾದ ಮಟ್ಟಿಗೂ ಪ್ರಯತ್ನಿಸಿ ನನ್ನ ಹೆಂಡತಿಯನ್ನು ಸಮಾಧಾನಸ್ಥಿತಿಗೆ ತರುವುದಾಗಿ ಭರವಸೆ ಕೊಟ್ಟ.

ನನ್ನ ಈ ಗೆಳೆಯ ನನ್ನ ಹೆಂಡತಿಗೆ ಅಪರಿಚಿತ ವ್ಯಕ್ತಿಯೇನಲ್ಲ. ಅವನು ಆಗಾಗ್ಗೆ ನಮ್ಮ ಮನೆಗೆ ಬರುತ್ತಿದ್ದವನು. ಆದ್ದರಿಂದ ಅವನ ಮಾತಿಗೆ ನನ್ನ ಹೆಂಡತಿ ಬೆಲೆ ಕೊಡುವಳೆಂದು ನಾನು ಆಶಿಗೊಂಡಿದ್ದೆ. ಆದರೆ, ಅವನು ತನ್ನ ಗುರುತರವಾದ ಸಂಧಾನಕಾರ್ಯವನ್ನು ಯಾವ ರೀತಿ ಜಯಪ್ರದವಾಗಿ ನಿರ್ವಹಿಸುವನೋ ಎಂಬ ಬಗ್ಗೆ ಬಹಳ ಸಂದೇಹಗ್ರಸ್ತನಾಗಿದ್ದೆ. "ನೀನು ಏನು ಮಾಡುವೆ? ನನ್ನ ಹೆಂಡತಿ ಈಗ ಬಹಳ ಮೂರ್ಖಳಾಗಿದ್ದಾಳಲ್ಲ?" ಎಂದು ಕೇಳಿದ್ದಕ್ಕೆ "ಅದೆಲ್ಲಾ ಕಟ್ಟಿಕೊಂಡು ನಿನಗೇನು? ನೋಡುತ್ತಾ ಇರು" ಎಂದು ನಗುತ್ತ ಉತ್ತರ ಕೊಟ್ಟಿದ್ದ ನನ್ನ ಗೆಳೆಯ.

ನನ್ನ ಗೆಳೆಯ ಮನೆಗೆ ಬಂದದ್ದನ್ನು ತಿಳಿದ ಕೂಡಲೆ, ನನ್ನ ಹೆಂಡತಿ ನನ್ನ ಮೇಲೆ ಯಾವ ಬಗೆಯ ಅಸಮಾಧಾನವನ್ನೂ ಹೊಂದಿರಲಿಲ್ಲವೋ ಎಂಬ ರೀತಿಯಲ್ಲಿ ವರ್ತಿಸಿದ್ದಳು; ಕಾಫಿ ಮಾಡಿ ನಗುನಗುತ್ತ ಅದನ್ನು ನಮ್ಮಿಬ್ಬರಿಗೂ ಕೊಟ್ಟಳು. ಅವಳ ನಗೆಯ ಹೊಂಬೆಳಕನ್ನು ಕಂಡು ಎಷ್ಟೋ ದಿನಗಳಾಗಿದ್ದುವು;

ಮಳೆಯ ಹೊಡೆತ ಮುಗಿದ ಮೇಲೆ ಹೊಂಬಿಸಿಲಿನಲ್ಲಿ ನಲಿಯುವ ತಿರೆಯಂತೆ ಹಿಗ್ಗಿದೆ ನಾನು.

ನನ್ನ ಹೆಂಡತಿ ಕಾಫಿ ಕೊಟ್ಟು ಒಳಕ್ಕೆ ಹೋಗಬೇಕು, ಅಷ್ಟರಲ್ಲಿ ನನ್ನ ಸ್ನೇಹಿತ – ಕವಿಮಿತ್ರ – " ಸರೋಜಮ್ಮ, ನಿಮ್ಮನ್ನು ಒಂದು ವಿಷಯ ಕೇಳ ಬೇಕು ಅಂತ ಮಾಡಿಕೊಂಡಿದ್ದೇನೆ. ನಿಮ್ಮ ಯಜಮಾನರ ನಡತೆಯ ವಿಷಯ ಕುರಿತದ್ದು. ನಾನು ಇವನಿಗೆ ಎಂದಿನಿಂದಲೂ ಬುದ್ಧಿವಾದ ಹೇಳುತ್ತಿದ್ದೇನೆ. ಮೂರ್ಖತನ; ಕೇಳಲಿಲ್ಲ. ನಿಮ್ಮನ್ನೂ ದುಃಖಕ್ಕೆ ಗುರಿಮಾಡಿ, ನನಗೂ ಕೋಪ ಬರುವ ಹಾಗೆ ಮಾಡಿದ್ದಾನೆ. ಆ ಕವನ ಇದೆ ನೋಡಿ...." ಎಂದು ನನ್ನ ಗೆಳೆಯ ನಾನು ಅವನಲ್ಲಿ ಕೊಟ್ಟಿದ್ದ ಕವನವನ್ನು ಜೇಬಿನಿಂದ ಹೊರಕ್ಕೆ ತೆಗೆದ.

ನಾನು ಸರೂವಿನ ಮುಖ ನೋಡಿದೆ. ಅವಳ ಮುಖದ ಮೇಲೆ ಸಂತೋಷ, ಆಶ್ಚರ್ಯ, ಗೆಲುವು – ಈ ಭಾವ ಮುದ್ರೆಗಳು ಒಂದಾದ ಮೇಲೊಂದರಂತೆ ಮೂಡಿ ಮಾಯವಾಗಿ, ನನ್ನ ಮೇಲೆ ಗೆಲುವು ಪಡೆದು " ನೋಡಿದಿರಾ, ನಿಮ್ಮ ಅವಿವೇಕ" ಎಂದು ನನ್ನನ್ನು ಹೀಯಾಳಿಸುವಂತೆ ಗೆಲುವಿನ ಮುದ್ರೆಯೊಂದೇ ನೆಲಸಿ ನಿಂತಿತ್ತು; ಅವಳು ನನ್ನನ್ನು ದೃಷ್ಟಿಯಿಂದಲೇ ನುಂಗುವಂತೆ ನೋಡು ತ್ತಿದ್ದಳು. ನಸುಮುನಿಸು ಕೂಡಿದ್ದ ಅವಳ ಗೆಲುವಿನ ನೋಟ ಉದಯ ಸೂರ್ಯಬಿಂಬದಂತೆ ನನಗೆ ಹುರಿಪನ್ನೇ ಹುಟ್ಟಿಸುತ್ತಿತ್ತು.

ನನ್ನ ಗೆಳೆಯ ತನ್ನ ಮಾತನ್ನು ಮುಂದುವರಿಸಿದ:

" ನೋಡಿ, ಈ ಕವನ ನಾನು ಬರೆದದ್ದು. (ನನ್ನ ಕಡೆ ನೋಡಿ) ಈ ಘಾಟಿ ಅದನ್ನು ತನ್ನದು ಎನ್ನುವ ಹಾಗೆ ಪದಗಳನ್ನು ಬದಲಾಯಿಸಿ ಬರೆದಿದ್ದಾನೆ. (ಸಂಕೋಚವನ್ನು ನಟಿಸಿ) ಅದು ನನ್ನ ಹೆಂಡತಿಯನ್ನು ಕುರಿತು ಬರೆದದ್ದು ಎನ್ನಿ. ನನ್ನ ಹೆಂಡತಿಯ ಹೆಸರಿನ ಬದಲು 'ಕಮಲೆ' ಅಂತ ಹಾಕಿಬಿಟ್ಟ. ನಿಮ್ಮ ಹೆಸರನ್ನೇ ಹಾಕಿದ್ದಿದ್ದರೆ ಚೆನ್ನಾಗಿರುತ್ತಿತ್ತು. ಹಾಗೂ ಮಾಡಲಿಲ್ಲ. ಭಾಷೆ, ಛಂದಸ್ಸು ಎಲ್ಲ ಅಧ್ವಾನ. ನನ್ನ ಕವನದ ಭಾವ ಇಲ್ಲಿ ಅಭಾವ. ಇತರರ ಬರವಣಿಗೆ ಕದ್ದು ಕವನ ಬರೆಯುವುದನ್ನು ಅಭ್ಯಾಸ ಮಾಡಬೇಡ ಅಂತ ಸಾರಿ ಸಾರಿ ಹೇಳಿದ್ದೇನೆ. ಕೇಳಲಿಲ್ಲ. ನಿಮ್ಮಿಂದ ಒಳ್ಳೆಯ ಶಿಕ್ಷೆಯಾಯಿತು. ಇನ್ನು ಮೇಲೆ ಬರೆದರೆ ನಿಮ್ಮ ಹೆಸರೇ ಹಾಕಿ ಬರೆಯುತ್ತಾನಂತೆ, ಬಿಡಿ. ಈಗಲೂ

ಅವನ ಮನಸ್ಸಿನಲ್ಲಿ ನೀವೇ ಕವನದ ವಿಷಯ. 'ಕಮಲೆ' ಎಂದರೆ 'ಸರೋಜ' ತಾನೆ? ಆದರೆ, ವರ್ಣನೆಯೆಲ್ಲ ನನ್ನ ಹೆಂಡತಿಯನ್ನು ಕುರಿತದ್ದು. ಇಂತಹ ಕವನ ಓದಿದರೆ ಯಾವ ಪತಿವ್ರತೆಗಾದರೂ ಕೋಪ ಬಾರದೆ ಇರುತ್ತದೆಯೆ?"

ಹೀಗೆ ಹೇಳಿ, ತನ್ನ ಜೇಬಿನಿಂದ ಇನ್ನೊಂದು ಹಾಳೆ ತೆಗೆದ.

"ನಾನು ಬರೆದ ಕವನ ಇದು. ಇದನ್ನೂ ಅದನ್ನೂ ನೀವೇ ಹೋಲಿಸಿ ನೋಡಿಕೊಳ್ಳಿ. ನಿಮ್ಮ ಯಜಮಾನ ಮಹಾಶಯರು ಮಾಡಿರುವ ಕವಿತೆಯ ಕಳ್ಳತನ ಹಾಗೂ ಅವಿವೇಕ ಗೊತ್ತಾಗುತ್ತದೆ" ಎಂದು ಹೇಳಿ, ನನ್ನ ಗೆಳೆಯ ಎರಡನ್ನೂ ನನ್ನ ಹೆಂಡತಿಯ ಕೈಗೆ ಕೊಟ್ಟ.

ನನ್ನ ಹೆಂಡತಿ ಎರಡನ್ನೂ ಮತ್ತೆ ಮತ್ತೆ ಓದಿಕೊಂಡು, "ನಿಮ್ಮ ಸ್ನೇಹಿತರಿಗೆ ಸಲಾಮು ಹಾಕಿ" ಎಂದು ಎರಡು ಕವನಗಳನ್ನೂ ನನ್ನ ಕೈಗಿತ್ತಳು. ಅವಳ ಮುಖ ನೋಡಿದೆ: ಸುಪ್ರಸನ್ನಳಾಗಿದ್ದಳು, ಸುಪ್ರೀತೆಯಾಗಿದ್ದಳು. ನನಗೆ ನಿಜವಾಗಿ ಕಾವ್ಯಸ್ಫೂರ್ತಿಯುಂಟಾಯಿತು.

ವಾಸ್ತವವಾಗಿ, ನನ್ನ ಕವನವನ್ನು ನನ್ನ ಕವಿಮಿತ್ರ ತನ್ನ ಸಹಜವಾದ ಕವಿತಾ ಶೈಲಿಯಲ್ಲಿ ತಿದ್ದಿ ಬರೆದಿದ್ದ. ಅದು ಉತ್ತಮವಾದ ಕವನವಾಗಿ ಪರಿಣಮಿಸದಿದ್ದರೂ ಓದಲರ್ಹವಾದ ಕವನವಾಗಿತ್ತು. ಅದು ಹೇಗಾದರೂ ಇರಲಿ; ನನ್ನ ಮತ್ತು ನನ್ನ ಹೆಂಡತಿಯ ನಡುವೆ ಎದ್ದಿದ್ದ ಗೋಡೆಯನ್ನು ಒಡೆಯುವ ಕಾರ್ಯದಲ್ಲಿ ಅದು ಯಶಸ್ವಿಯಾಯಿತು. ಅದು ಹೀಗಿದೆ:

"ಸುಮಧುರ ಸುವಾಸಿತಾ ಪ್ರೇಮಮಯಿ ಸರೋಜಾ
ಕಮನೀಯ................"

ಇಲ್ಲ, ಇಲ್ಲ. ಅದನ್ನು ಇಲ್ಲಿ ಪ್ರಕಟಿಸುವುದಿಲ್ಲ. ಅಂದು ಮೊಳೆತ ನಿಜವಾದ ಕಾವ್ಯಸ್ಫೂರ್ತಿಯ ಫಲವಾಗಿ ಕೆಲವು ಪ್ರಣಯ ಗೀತೆಗಳನ್ನು ಬರೆದಿದ್ದೇನೆ. ಅವನ್ನು ನನ್ನ ಕವಿಮಿತ್ರನೂ ಮೆಚ್ಚಿಕೊಂಡು ಪ್ರೋತ್ಸಾಹಿಸಿದ್ದಾನೆ. ಎಂದಾದರೂ ಅವುಗಳೊಂದಿಗೆ ಆ ನನ್ನ – ಅಲ್ಲ, ನನ್ನ ಮಿತ್ರನ – ಕವನವನ್ನೂ ಪ್ರಕಟಿಸುತ್ತೇನೆ. ನನ್ನದಾಗಿ ಆ ಕವನವನ್ನು ಪ್ರಕಟಿಸಲು ನನ್ನ ಮಿತ್ರನ ಒಪ್ಪಿಗೆಯೇನೋ ದೊರೆತಿದೆ: ಉಳಿದವನ್ನು ಪ್ರಕಟಿಸಲು ನನ್ನ ಹೆಂಡತಿಯ ಒಪ್ಪಿಗೆ ಇನ್ನೂ ದೊರೆತಿಲ್ಲ.

---

# ಹಾದಿಯ ಚೆಲುವೆ

" ಟ್ರಂ....ಟ್ರಂ....ಟ್ರಂ...."

ಸತ್ ಪ್ರಜೆಯಂತೆ, ಪೌರನಿಯಮಬದ್ಧನಾಗಿ, ರಸ್ತೆಯ ಎಡಪಕ್ಕದಲ್ಲಿಯೇ, ಪಾದಚಾರಿಗಳಿಗೂ ದನಗಳಿಗೂ ಮಾತ್ರ ಮೀಸಲಾಗಿರುವ 'ಫುಟ್ ಪಾತ್' ಎನ್ನುತ್ತಾರಲ್ಲಾ – ಆ ಪುಟ್ಟಪಾತಿನಲ್ಲಿಯೇ, ಕಾಲುದಾರಿಯಲ್ಲಿಯೇ – ಕುಂಟುತ್ತಾ ನಡೆದುಕೊಂಡು ಹೋಗುತ್ತಿದ್ದೆ.

" ಟ್ರಂ....ಟ್ರಂ....ಟ್ರಂ....ಟ್ರಂ...."

ಅಧ್ವಾನ! ಹಾಳುದಾರಿ, ಆ ಕಾಲುದಾರಿ – 'ಒನ್‌ಫುಟ್ ಪಾತ್' (One-foot Path) – ಈಗಿನ ಕಾಲಕ್ಕೆ ತಕ್ಕದ್ದು. ಒಬ್ಬರ ಹಿಂದೆ ಒಬ್ಬರು ಕ್ಯೂ ಹಿಡಿದು ಅಂದರೆ ಸಾಲುಗಟ್ಟಿ, ಹೋಗಲು ತಕ್ಕದ್ದು! ಜನದ ಓಡಾಟ ಹೆಚ್ಚಾಗಿರಲಿಲ್ಲ: ಪ್ರಾತಃಕಾಲ ಎಂಟು ಅಷ್ಟೆ; ನಾನೊಬ್ಬ....ಮತ್ತೆ.... ಮುಂದುಗಡೆ....

ಮತ್ತೆ " ಟ್ರಂ....ಟ್ರಂ....ಟ್ರಂ...."

ಯಾವನೋ ಹುಚ್ಚ, ಸುಮ್ಮನೆ ಒಂದೇ ಸಮನೆ ಸೈಕಲ್ ಗಂಟೆ ಬಾರಿಸಿಕೊಂಡು ಬರುತ್ತಾ ಇದ್ದಾನೆ! ನನ್ನ ಬಲಗಡೆ ನಡುರಸ್ತೆಯಲ್ಲಿ ಯಾರೂ ಇಲ್ಲ; ಎಡಗಡೆ ನಾನೊಬ್ಬ....ಮತ್ತೆ....ಮುಂದುಗಡೆ....

ಮತ್ತೆ " ಟರ್ರಂ....ಟರ್ರಂ....ಟ್ರಂ....ಟರ್ರಂ"

ತಿರುಗಿ ನೋಡೋಣವೆಂದುಕೊಳ್ಳುವಷ್ಟರಲ್ಲಿ ನನ್ನ ಬಲಭುಜದ ಮೇಲೆ ಒಂದು ಕೈ ಬಿತ್ತು. ವಾಹನಾರೂಢನಾಗಿದ್ದ ವಾಗೀಶಾಚಾರ್ಯ ವಾಗ್ದೇವಿಯ ಆರಾಧಕನಾದ ನನ್ನನ್ನು ಹಿಡಿದು ನಿಲ್ಲಿಸಿದ.

ವಾಗ್ದೇವಿಯ ಆರಾಧಕನಾದ ನನ್ನ ಫೌಂಟೆನ್‌ಪೆನ್ನು ಕಳೆದುಹೋಗಿ ದಶಕವಾಯಿತು; ಸಾಧಾರಣ ಲೇಖನಿ ಕೈಗೆ ತೆಗೆದುಕೊಂಡರೆ ಬುದ್ಧಿ ಓಡುವುದೇ ಇಲ್ಲ. ಏಕೆಂದರೆ 'ಬಫ್' (Buff : ಕಂದು) ಕಾಗದ; ಪೆನ್ಸಿಲ್ಲೋ: ನಮ್ಮ ದೇಹದ ಹಾಗೆ ಲೊಡ್ಡು! ಹೀಗೆ ಕೈ ಮುರಿದುಹೋದರೆ, ವಾಗ್ದೇವಿಯ ಭಕ್ತರೆಲ್ಲರೂ ಬಾಯಿ ಮುಚ್ಚಿಕೊಂಡು ಕೈಕಟ್ಟಿಕೊಂಡು ಕುಳಿತುಕೊಳ್ಳಬೇಕು.

ಆದರೆ, ಕಾಲಧರ್ಮ ಕೂಡ ವಾಗೀಶಾಚಾರ್ಯನಂಥವರ ಬಾಯಿ ಕಟ್ಟುವುದಕ್ಕೆ ಎಂದಿಗೂ ಅಶಕ್ತವಾದುದೇ ಸರಿ. ಈ ಅಪರಬ್ರಹ್ಮ ಬಾಯಿಬಿಟ್ಟರೆ ಇವನಿಗೆ ನಾಲಗೆ ಒಂದೋ ನಾಲ್ಕೋ ಎಂದು ಯಾರಿಗಾದರೂ ಸಂದೇಹ ಬಂದೀತು. ಸಮಯ ಸಂದರ್ಭ, ಸುತ್ತಮುತ್ತಣ ಜನ, ಏನೂ ಇವನ ವಾಕ್ ಪ್ರವಾಹವನ್ನು ತಡೆಯಲಾರದು. ಅವನು ಕೆಲವು ಕಾಲ ನನ್ನ ಹಾಗೆ ವಾಗ್ದೇವಿಯ ಉಪಾಸನೆ ಮಾಡಿ ಅವಳ ಕೈಬಿಟ್ಟು, ಅಲ್ಲಿ ಇಲ್ಲಿ ಬದಲಿ ಕೆಲಸ, ಕಂಟ್ರಾಕ್ಟು, ವ್ಯಾಪಾರ, ಉದ್ಯೋಗ, ದಂಧೆ, ಕಸಬು, ಕೂಲಿ ಇವನ್ನೆಲ್ಲ ಎಂಟು ಹತ್ತು ವರ್ಷಕಾಲ ಕ್ರಮವಾಗಿ ಉಪಾಸಿಸಿ, ವಿಮಾದೇವಿಯನ್ನೊಲಿದು ಆಕೆಯ ಪ್ರಚಾರಕನಾದ ಮೇಲೆ ಅವನ ಮಾತಿಗೆ ಹೆಚ್ಚು ಹೊಳಪು ಬಂದುಬಿಟ್ಟದೆ! ತಂದೆ ಇಟ್ಟ ಅಪೂರ್ವವಾದ ಹೆಸರು ಸರ್ವಥಾ ಸಾರ್ಥಕವೆನಿಸಿಬಿಟ್ಟದೆ. ವಾಗೀಶನ ತಲೆ ಕಂಡರೆ ಸಾಕು, ನನ್ನ ತಲೆ ತಪ್ಪಿಸಿಕೊಳ್ಳುತ್ತೇನೆ: ಅವನ ಮಾತಿನ ಪ್ರಭಾವವೋ ಅವನ ಹೊಸ ಉದ್ಯಮದ ಪ್ರಭಾವವೋ ನಾನರಿಯೆ.

ಆದರೆ, ವಾಗೀಶನ ಮನಸ್ಸು ನಿಷ್ಕಲ್ಮಷವಾದದ್ದು. ಒಳ್ಳೆಯ ರಸಿಕ ಮನೋವೃತ್ತಿ ಅವನದು. ಮಾತು ಹೆಚ್ಚು. ಏನು ಮಾಡುವುದು? ಅವನ ಸ್ವಭಾವ ತಿಳಿಯದವರು ಅವನ ವಾಗ್ವಿಪುಲತೆಗಾಗಿ ಬೇಸರಗೊಳ್ಳಬಹುದು, ಕೋಪಿಸಿಕೊಳ್ಳಬಹುದು; ಆದರೆ ನಾನು ಅವನ ಮಾತುಕೊಚ್ಚಾಟವನ್ನು ಯಾವಾಗಲೂ ಸಹನೆಯಿಂದ ಕೇಳಿದ್ದೇನೆ, ಅಥವಾ ಸಹಿಸಿಕೊಂಡಿದ್ದೇನೆ. ಅವನ ಮನೆ ಉತ್ತರದ ಕೊನೆ, ನನ್ನ ಮನೆ ದಕ್ಷಿಣದ ಕೊನೆ. ದಾರಿಯಲ್ಲಿ ಮಾತಿಗೆ ನಿಲ್ಲಿಸಿಕೊಂಡುಬಿಟ್ಟರೆ ಗಂಟೆಯಾದರೂ ಬಿಡ. ಒಂದು ದಿನ ನಮ್ಮ ಮನೆಯ ಬೀದಿಯವರೆಗೂ ಬಂದ; ತಿರುವಿನ ಮೂಲೆಯಲ್ಲಿ ನಿಂತುಬಿಟ್ಟ; ಮನೆಯೊಳಕ್ಕೆ ಬಾರಯ್ಯ ಎಂದರೆ ಬಾರ; ನಾನು ಅವನಲ್ಲಿ ಒಂದು ಪಾಲಿಸಿ ತೆಗೆಯುವವರೆಗೂ ಅವನು ನಮ್ಮ ಮನೆಯೊಳಕ್ಕೆ ಕಾಲಿಡುವುದಿಲ್ಲವಂತೆ-ಇದು ಅವನ ಪ್ರತಿಜ್ಞೆ.

"ಏನಯ್ಯಾ ಮಿತ್ರ? ಎತ್ತ ಕಡೆ ಹೊರಟೆ?" ಅವನು ಕೇಳಿದ.

"ಆಸ್ಪತ್ರೆಗೆ...."

"ಹೀಗೆ ಕುಂಟುತ್ತಾ ಹೋದರೆ ಎಷ್ಟು ಹೊತ್ತಿಗೆ ಆಸ್ಪತ್ರೆ ತಲಪುವುದು? ನಿಂತುಕೊಳ್ಳಯ್ಯಾ ಸ್ವಲ್ಪ. ಏನು ಗಾಬರಿಬೀಳುತ್ತೀಯಲ್ಲ? ನಾನೇನು

ನಿನ್ನನ್ನ ವಿಮೆಮಾಡು ಅಂತ ಕೇಳುವುದಿಲ್ಲ; ನಮ್ಮ 'ವಿಮಾ ಪ್ರಪಂಚ'ಕ್ಕೆ ವಿಮೆಯ ಮೇಲೆ ಕವಿತೆಯನ್ನೋ ಕಥೆಯನ್ನೋ ಬರೆದುಕೊಡು ಎಂದು ಕೇಳು ವುದಿಲ್ಲ. ಏನೋ ಕುಂಟುತ್ತಾ ಹೋಗುತ್ತಾ ಇದ್ದೆಯಲ್ಲ, ಬೈಸಿಕಲ್ ಕೊಡಲೆ ಅಂತ ಕೇಳೋಣ ಅಂತ ನಿಲ್ಲಿಸಿಕೊಂಡೆ ಕಣಯ್ಯ, ಅಷ್ಟೆ. ಬೆಳಗ್ಗೆ ೭ ಗಂಟೆಯ ಹೊತ್ತಿಗೆ ಬರಹೇಳಿದ್ದ ಆ ಪಾಪಿ ಪುರುಷೋತ್ತಮ ರಾವ್. ಬಸವನಗುಡಿಗೆ ಹೋಗಿದ್ದೆ. ೫ ಸಾವಿರಕ್ಕೆ, ಅವನ ಹೆಂಡತಿ ಹೆಸರಿನಲ್ಲಿ, ಒಂದು 'ಪ್ರಪೋಸಲ್' ಸಂಪಾದಿಸಿದೆ; ೯ ಗಂಟೆಯ ಹೊತ್ತಿಗೆ ಆ ಶನಿ ಶಂಕರರಾಯ ಬರಹೇಳಿದ್ದಾನೆ. ಅವನ ಮನೆಗೆ ನಾನು ವಕ್ರಿಸಬೇಕಾಗಿದೆ. ನಾವು ಸುತ್ತಾಡಿದರೇ ಸಂಪಾದನೆ. ನಿನ್ನ ಹಾಗೆ ನಿಧಾನವಾಗಿ ಬೀದಿಯಲ್ಲಿ....ಈಗ ನಿನ್ನ ಮುಂದೆ ಅನತಿದೂರದಲ್ಲಿ ಮಂದಗಮನದಲ್ಲಿ ಸಾಗುತ್ತಿದೆಯಲ್ಲ....ಅಂಥ ಸ್ತ್ರೀ ವ್ಯಕ್ತಿಗಳನ್ನು ನಾವು ಹಿಂಬಾಲಿಸುತ್ತ ಹೋದರೆ....ಆಗುವ ಸಂಪಾದನೆಗೆ ಸೊನ್ನೆ, ಅಥವಾ ಆದ ಸಂಪಾದನೆಗೇ ಸೊನ್ನೆ. ಇಂಥ ಸಂದರ್ಭಗಳಲ್ಲಿ ಕಾಲುನಡಗೆಯೇ ಕಾಲೋ ಚಿತ ಕಣಯ್ಯ. ಅಲ್ಲವೆ ಮಿತ್ರ? ಸೈಕಲ್ ಮೇಲೇ ಹಾರಿಹೋಗುವಾಗ ನಿನ್ನ ಹಾಗೆ ಹಿಂಬಾಲಿಸುವುದಕ್ಕಾಗುತ್ತದೆಯೇ? ಒಳ್ಳೆಯ ರಸಿಕ ಕಣಯ್ಯ ನೀನು! ಕುಂಟು ಎಂಬ ಕುಂಟುನೆಪ ಇಟ್ಟುಕೊಂಡು, ಸ್ವಾಭಾವಿಕವಾಗಿಯೇ ಮಂದ ಗಮನೆಯರಾದ ಸುಂದರ ಸ್ತ್ರೀಯರನ್ನು ಸಂಧಿಸಿದಾಗ, ಅಥವಾ ಹಿಂದಿನಿಂದ ಕಂಡಾಗ, ಮುಂದೆ ಮುಂದೆ ನಡೆದು ಹೊರಟುಹೋದರೆ ಚೆಂದದ ನೋಟ ಹಿಂದೆಯೇ ಉಳಿದುಹೋಗುವುದಲ್ಲಾ ಎಂದು ವ್ಯಥೆಪಟ್ಟು, ಕಲ್ಲುಸಕ್ಕರೆ ಸವಿದ ಹಾಗೆ ಪಶ್ಚಾತ್‌ದರ್ಶನಮಾತ್ರದ ಸುಖವನ್ನು ಹಿಂದಿನಿಂದಲೇ ಸವಿಯುವ ಹಂಚಿಕೆ ಹಾಕುವ ನಿನ್ನಂಥವರೇ ನಿಜವಾದ ರಸಿಕರಯ್ಯ....ಏನು, ನಿಜವಾಗಿಯೂ ಕುಂಟುತ್ತಿದ್ದೀಯ?....ಉಳುಕಲ್ಲವೆ?....ಮುಳ್ಳುಗಿಳ್ಳು ಹೊಕ್ಕಿದೆಯೊ?.... ಅದೂ ಅಲ್ಲವೆ?....Rheumatic Pains ಏ (ಸಂಧಿವಾತವೆ)?....ಈ ವಯಸ್ಸಿ ನಲ್ಲಿ! ಅಲ್ಲ ಕಣಯ್ಯ: Romantic Pains ಊ!....ಶ್ರೀರಾಮನ ಹಾಗೆ ಏಕಪತ್ನೀವ್ರತ – ರಾಮ್ಯಾಂಟಿಕ್ Pains (Ramaನ Antique Pains) – ಪಾಲಿಸುತ್ತಿದ್ದರೂ ಹಾದಿಯಲ್ಲಿನ ಹೆಣ್ಣುಮಕ್ಕಳನ್ನು ಹಿಂಬಾಲಿಸುವುದನ್ನೆ ಜೀವನಯಾತ್ರೆಯಾಗಿಟ್ಟುಕೊಂಡು, ವೃಥಾ ತೊಳಲಿ ಬಳಲಿ, ಅಲಭ್ಯಸೌಖ್ಯ ಕ್ಕಾಗಿ ಹಾತೊರೆಯುವ ಮನೋರೋಗದ ಶಾರೀರಕ ಗೋಚರ ಚಿಹ್ನೆಯೇ

ಈ Painsಉ....ನಿನ್ನ ಈ ರೋಗಕ್ಕೆ ಸಭ್ಯತನವೇ ಮದ್ದು....ಯಾಕಯ್ಯ ನಗುತ್ತೀಯೆ? ಬುದ್ಧಿವಾದ ಹೇಳಿದರೆ ನಗುವುದೆ?....ಏನು, ನಾನು ಸೈಕಲ್ ಇಳಿದು ನಡೆದುಕೊಂಡು ಬರುತ್ತಿರುವುದೂ ಕೂಡ ಆ ವ್ಯಕ್ತಿಯನ್ನು ನೋಡುವ ಉದ್ದೇಶದಿಂದ ಎಂದು ನಗುವಿನ ಅರ್ಥವೋ?....ನೀನು ಹುಚ್ಚ ಎಂದೆ, ಹುಚ್ಚ. ಹಿಂಬಾಲಿಸಿದರೆ ನೋಡುವುದಕ್ಕೆ ಸಾಧ್ಯವಾಗುತ್ತೆಯೇನಯ್ಯ? ನೋಡಬೇಕಾದರೆ ಮುಂಬಾಲಿಸಬೇಕು....ಏನು, ಮತ್ತೆ ನಗುತ್ತೀಯೆ?....ಮುಂಬಾಲಿಸು ಎನ್ನುವ ಮಾತು ನನ್ನ ನಿಘಂಟುವಿನಲ್ಲಿದೆ; ಬೇಕಾದರೆ ನಿನ್ನ ನಿಘಂಟುವಿಗೂ ಸೇರಿಸಿಕೊ. ಇರಲಿ. ಮುಂಬಾಲಿಸೋಣವೇನು? ಏನು, ಬೇಡವೇ?.... ಇದೇನಯ್ಯ, ಸಂಜ್ಞಾಪ್ರಕರಣವನ್ನ ಪ್ರಾರಂಭಿಸಿಬಿಟ್ಟೆ!....ಪ್ರಶ್ನೆ ಕೇಳಿದರೆ ಉತ್ತರವೇ ಇಲ್ಲವಲ್ಲಯ್ಯ. ಹೋಗಲಿ ಮುಂಬಾಲಿಸೋಣವೋ ಬೇಡವೋ? ....ಬೇಡವೋ? – ಬೇಡ....ಬೇಕಯ್ಯ, ಮುಂಬಾಲಿಸುವುದಕ್ಕೂ ಧೈರ್ಯ ಬೇಕು. ನಮ್ಮ, ಆ ಸುಬ್ಬರಾಮಯ್ಯ ಇದ್ದಾರೆ ನೋಡು....ಇದೇನು ಬಾಯಿ ಬಿಡುತ್ತಿ?....ಸುಬ್ಬರಾಮಯ್ಯನವರು ಗೊತ್ತಿಲ್ಲವೇನಯ್ಯ?....ಸುಬೇದಾರ್ರು.... ಅಡ್ಡ ಹೆಸರು ಅಂತ ಇಟ್ಟುಕೊ....ಅವರಿಗೆ ಇನ್ನೇನೂ ಕೆಲಸವಿಲ್ಲ: ಅವರ ಸುಬೇದಾರಿಕೆ ಎಲ್ಲ ಬೀದಿಯಲ್ಲೆ; ಇಲ್ಲ ಮನೆಯಲ್ಲಿ – ಹೆಂಡತಿಯ ಮುಂದೆ. ಅಪ್ಪ ಕೂಡಿಟ್ಟ ಆಸ್ತಿ: ಎಷ್ಟು ಖರ್ಚು ಮಾಡಿದರೂ ಕರಗವೊಲ್ಲದು. ಹತ್ತು ವರ್ಷದಿಂದ ಒಂದೇ ಸಮನಾಗಿ ಚುನಾವಣೆ ಪ್ರಚಾರಕ್ಕಾಗಿ ವರ್ಷಕ್ಕೆ ಸರಾಸರಿ ಎರಡು ಸಾವಿರ ರೂಪಾಯಿನಂತೆ ಇಪ್ಪತ್ತು ಸಾವಿರ ರೂಪಾಯಿ ಖರ್ಚುಮಾಡಿದ್ದಾನೆ....ಇನ್ನೂ ಮುನಿಸಿಪಲ್ ಕೌನ್ಸಿಲ್ ಮೆಂಬರಾಗಿಲ್ಲ....ಇನ್ನೂ ಹೀಗೇ ಅನೇಕ ಬಾಬ್ತುಗಳಿವೆ....ಒಂದು ಲಕ್ಷ ಕಳೆದಿದ್ದಾನೆ ತಹಲಿನವರೆಗೆ....ಯಾವುದಾದರೂ ಧರ್ಮಕಾರ್ಯ ಮಾಡಿದ್ದರೆ ಟೈಟಲ್ ಆದರೂ ಬರುತ್ತಿತ್ತು. ಅದೂ ಇಲ್ಲ. ಹೆಂಡತಿಯ ಹೆಸರಿನಲ್ಲಿ, ಮಕ್ಕಳ ಹೆಸರಿನಲ್ಲಿ ಐದು ಐದು ಸಾವಿರಕ್ಕಾದರೂ ಇನ್‌ಷ್ಯೂರ್ ಮಾಡಯ್ಯ ಅಂತ ಗಿಣಿಗೆ ಹೇಳುವ ಹಾಗೆ ಹೇಳಿದೆ, ಕೇಳಲಿಲ್ಲ. ಈ ಲಕ್ಷಾಧೀಶ್ವರ ಒಟ್ಟು ಐದು ಸಾವಿರಕ್ಕೇನೇಯೇ ನನ್ನ ಮೂಲಕ ಇನ್‌ಷ್ಯೂರ್ ಮಾಡುವುದು!....ನನ್ನ ಹಾಗೇ ಇನ್ನೂ ಅನೇಕ ಜನ ಇದ್ದಾರೆ. ದಿಟ....ಒಟ್ಟು ೫೦ ಸಾವಿರಕ್ಕೆ ಮಾಡಿದ್ದಾನಂತೆ – ಆದರೂ ಸಾಲದು....ಸುಮ್ಮನೆ ದುರಗುಟ್ಟಿಕೊಂಡು ನೋಡಬೇಡವೋ ಹಾಗೆ: ವಿಮೆ ವಿಚಾರ ಇನ್ನು ಮುಂದು

ವರಿಸುವುದಿಲ್ಲ. ಈ ಸುಬೇದಾರ ಇದ್ದಾನೆ ನೋಡು....ಠಾಕು ಠೀಕಾಗಿ ಸೂಟು, ಜರಿಯ ಪೇಟ, ಹಾಕಿಕೊಂಡು ಹೊರಟುಬಿಡುತ್ತಾನೆ....ಕಲಿಯುಗದ ಕಾಮಣ್ಣ....ಆಳೂ ಹಾಗೆ ಇದ್ದಾನೆ ಅನ್ನು. ನಡಗೆ ನಿಧಾನ, ವಿಪರೀತ ನಿಧಾನ; ಹೀಗೆ ಯಾವುದಾದರೂ ವ್ಯಕ್ತಿ ಸಿಕ್ಕಿದರೆ ಸರಿ – ಒಂಟಿಯಾಗಿ ಹೋಗುತ್ತಿರಲಿ, ಯಾರ ಜೊತೆಯಲ್ಲೇ ಹೋಗುತ್ತಿರಲಿ – ನಡಗೆ ಚುರುಕಾಗಿ ಬಿಡುತ್ತೆ: ಆ ವ್ಯಕ್ತಿಯನ್ನು ಮುಂಬಾಲಿಸಿ ಬಿಡುತ್ತಾನೆ: ಹಾಗೆ ಮುಂಬಾಲಿಸುವಾಗ ಮತ್ತೆ ನಡೆ ಮಂದ, ಎಷ್ಟು ಬೇಕೋ ಅಷ್ಟೇ ಮಂದ. ಅವನ ಕೊರಳು ತಿರುಗುತ್ತಲೇ ಇರುತ್ತದೆ. ಕಣ್ಣು ಹಿಂಬಾಲಿಸುತ್ತಿರುತ್ತದೆ ಅಥವಾ ಮುಂಬಾಲಿಸುತ್ತಿರುತ್ತದೆ – ಆ ವ್ಯಕ್ತಿಯು ಮುಖವನ್ನು! ಹಾಗೆ ಮುಂಬಾಲಿಸುವುದಕ್ಕೂ ಧೈರ್ಯ ಬೇಕು. ಹಿಂಬಾಲಿಸಿದರೆ ಕಾಣುವುದು ಏನು? ಬರೀ ಬೆನ್ನು!....ನೀನೇನು ನಡುವೆ ಬಾಯಿ ಹಾಕಬೇಡ. ನೀನು ತುಟಿ ತೆರೆಯುವುದಕ್ಕಿಂತ ಮುಂಚೆಯೇ ನಿನ್ನ ಇಂಗಿತ ಅರ್ಥವಾಯ್ತು. ನಿಜವಾಗಿ ಈ ವ್ಯಕ್ತಿಯ ಹಿಂಭಾಗವೂ ಚೆನ್ನಾಗಿದೆ: ಎಷ್ಟು ಚೆನ್ನಾಗಿದೆಯೆಂದರೆ, ಬೇಗ ಮುಂಬಾಲಿಸಿಬಿಟ್ಟು ಮುಂಭಾಗವನ್ನೂ ನೋಡಿಬಿಡಲೇ ಎನ್ನುವ ಮಟ್ಟಿಗಿದೆ!....ನೀನೋ ಕುಂಟುತ್ತ ಇದ್ದೀಯೆ: ನಿನ್ನ ಜೊತೆ ನಡೆದರೆ ಹಿಂಬಾಲಿಸುವುದೂ ಕಷ್ಟವೆ....ಇದೇಕಯ್ಯ ಹೀಗೆ ಮುಖ ಸಿಂಡರಿಸಿಕೊಳ್ಳುತ್ತೀಯೆ?....ನೋಡುವುದೂ ಒಂದು ತಪ್ಪೆ? ಸೌಂದರ್ಯದ ನಿಧಿಯನ್ನೇ ಸಮೀಪಿಸಿದಾಗ ಅದನ್ನು ಕಣ್ಣೆತ್ತಿ ನೋಡದೆ ಮುಂದೆ ನಡೆಯುವಂಥ ಸಂನ್ಯಾಸಿ ಯಾರು ಈ ಜಗತ್ತಿನಲ್ಲಿ? ಕೆಲವರು, ನಮ್ಮ ಸುಬೇದಾರರ ಹಾಗೆ, ಮುಂಬಾಲಿಸುತ್ತ ನೋಡುತ್ತಲೇ ಇರುತ್ತಾರೆ, ಧೈರ್ಯವಾಗಿ. ಇನ್ನು ಕೆಲವರು, ನಿನ್ನ ಹಾಗೆ – ರಸಿಕರಾದರೂ ಧೈರ್ಯವಿಲ್ಲದ್ದರಿಂದ – ಸಿಕ್ಕಿದಷ್ಟೆ 'ಸಿಕ್ಕಿನುಂಡೆ' ಅಂತ – ಹಿಂಬಾಲಿಸುತ್ತ ಹಾತೊರೆಯುತ್ತ ಹೋಗುತ್ತಾರೆ; ಇನ್ನೂ ಕೆಲವರು – ನನ್ನಂತಹವರು – ಭರ್ರನೆ ಸೈಕಲ್‌ಮೇಲೆ ಹೋಗುತ್ತಿದ್ದರೂ ಸರ್ರನೆ ತಿರುಗಿ ನೋಡಿ ಕ್ಷಣಮಾತ್ರದಲ್ಲಿ ಸೌಂದರ್ಯ ಸಾರವನ್ನೆಲ್ಲ ಗ್ರಹಿಸಿ ಹಾರಿ ಹೋಗುತ್ತಾರೆ; ಸಂನ್ಯಾಸಿಯ ಹಾಗೆ ನಟಿಸುತ್ತ ಸಾಗುವ 'ಆಕಾಶರಾಯ'ರು ಕೆಲವರು, ಯಾರಿಗೂ ಕಾಣದ ರೀತಿಯಲ್ಲಿ ಕಡೆಗಣ್ಣಲ್ಲೆ, ಅರ್ಥಾತ್ ಕಳ್ಳ ನೋಟದಲ್ಲೆ ನೋಡಿ ನಿರಾಸಕ್ತರಂತೆ ಮುಂದುವರಿಯುತ್ತಾರೆ. ಈ ಸಂನ್ಯಾಸಿಗಳನ್ನ ಕಂಡರೆ ನನಗಾಗೋದಿಲ್ಲ ನೋಡು. ನಿನ್ನಂಥ ಪುಕ್ಕಲರನ್ನು ಅರ್ಥಾತ್

ಹೆಣ್ಣಿಗರನ್ನು ಕಂಡರೂ ಅಷ್ಟಷ್ಟೆ. ಎಲ್ಲಿ, ಸ್ವಲ್ಪ ಬೇಗ ನಡಿ ನೋಡೋಣ.... ಸರಿ, ನಿನ್ನ ದೃಷ್ಟಿ ಆ ಹೆಣ್ಣಿನ ಹಿಂಭಾವದ ರೂಪರೇಖೆಯನ್ನು ತಿದ್ದುತ್ತಾ ಇದೆ...ನನ್ನ ಮಾತನ್ನು ನೀನು ಕೇಳುತ್ತಲೇ ಇಲ್ಲ...ಹೌದಯ್ಯ, ಇಷ್ಟು ಹೊತ್ತಿನ ವರೆಗೂ ನಾನು ಗಮನಿಸಿಯೇ ಇರಲಿಲ್ಲ. ಚಿನ್ನದ ನಾಣ್ಯದ ಮುಮ್ಮುಖಕ್ಕೆ ಎಷ್ಟು ಬೆಲೆಯೋ ಹಿಮ್ಮುಖಕ್ಕೂ ಅಷ್ಟೇತಾನೆ ಬೆಲೆ? ಎರಡು ಮುಖಗಳೂ ಸೇರಿ ತಾನೆ ಆ ಚಿನ್ನದ ನಾಣ್ಯ? ಈಗ ನಮಗೆ ಪೂರ್ವಜನ್ಮ ಸುಕೃತದಿಂದ ಗೋಚರವಾಗುತ್ತಿರುವುದು ಈ ಚಿನ್ನದ ಪುತ್ಥಳಿಯ, – ನಡೆಯುವ ನಾಣ್ಯದ – ಬೆನ್ನಲ್ಲ, ಹಿಮ್ಮುಖ! ಚಿನ್ನದ ಪುತ್ಥಳಿ!! ಆಹಾ! ಚರ ಸುವರ್ಣ ಪುತ್ಥಳಿಯೋ, ಜಗತೀಜಂಗಮವಲ್ಲರಿಯೋ, ಸೌಂದರ್ಯಪುಷ್ಪವೃಷ್ಟಿಗರೆಯುವ ಚಂಚಲ ಮಂದಾರತರುವೋ! ಏನು ಹೇಳಿದರೂ ಉತ್ಪ್ರೇಕ್ಷೆಯಾಗಬಹುದು; ಆದರೆ, ನಡೆಯುವ ಚಿನ್ನದ ಬೊಂಬೆ! ಹೆಸರು 'ಕನಕಾಂಗಿ' ಎಂದಿದ್ದಿರಬಹುದಾದರೆ ಎಷ್ಟು ಚೆನ್ನಾಗಿ ಒಪ್ಪುತ್ತದೆ! ಬೆಳ್ಳನೆಯ ಒಳ ಲಂಗದ ಮೇಲೆ 'ಕನಕಾಂಬರ' ಬಣ್ಣದ ಸೀರೆ, ಅದೇ ಬಣ್ಣದ ಜಾಕೆಟ್ಟು, ಮುಡಿದಿರುವುದೂ ಕನಕಾಂಬರ ಹೂವೆ! ಕೈತುಂಬ ಕನಕವಲಯ, ಚಿನ್ನದ ಬಳೆ! ಏನು taste ಉ, ಎಂಥ ಅಭಿರುಚಿ! ಆಕೆಯ ಗಂಡ ಕೂಡ ಒಳ್ಳೇ ರಸಿಕನೇ ಇರಬೇಕು. ಉಡಿಗೆ ತೊಡಿಗೆ ಗಂಡ ತೆಗೆದುಕೊಡಬಹುದು. ಆದರೆ ಅಂಗಸೌಷ್ಠವ? ಎಂಥ ಅಂಗ ಸೌಷ್ಠವವಯ್ಯ! ಅದಕ್ಕೆ ತಕ್ಕ ಬಿಂಕ ಬಿನ್ನಾಣ, ಒನಪು ಒಯ್ಯಾರ, ವಿಲಾಸ ವಿಭ್ರಮ! ಎಲ್ಲವೂ ಆ ಬಳುಕು ನಡಗೆಯಲ್ಲಿ ಹೇಗೆ ತುಳುಕಿ ಕಾಣುತ್ತಿದೆ ನೋಡಯ್ಯ! ಏನೋ ಅಂತಿದ್ದೆ ಕಣೋ ನಿನ್ನ, ಒಳ್ಳೆ ಘಾಟಿ! ಹಿನ್ನೋಟದಲ್ಲಿ ಸ್ವಾರಸ್ಯ ಇಲ್ಲದೆ ಹಿಂಬಾಲಿಸುತ್ತಿದ್ದೀಯ? ನೀನು ರಸಿಕ ಎನ್ನುವುದು ಇವೊತ್ತು ಸ್ಥಿರಪಟ್ಟಿತಯ್ಯ. ಅಲ್ಲದೆ, ಒಳ್ಳೆಯ ವ್ಯಕ್ತಿಯನ್ನೇ ಹಿಂಬಾಲಿಸುತ್ತಿದ್ದೀ ಕಣಯ್ಯ ನೀನು? ನಡಗೆಯಲ್ಲಿ, ಪದನ್ಯಾಸದಲ್ಲಿ, ಕಂಡುಬರುವ ನೃತ್ತವಿಲಾಸವನ್ನು ಸೂಕ್ಷ್ಮವಾಗಿ ಸಮೀಕ್ಷಿಸಿದ್ದೇ ಆದರೆ, ಈಕೆ ನರ್ತಕಿಯೋ ನಟಿಯೋ ಆಗಿರುವಂತೆ ತೋರುತ್ತದೆ...ಅಲ್ಲದೆ ಜೊತೆಯಲ್ಲಿ ಯಾರೂ ಇಲ್ಲ...ಅಭಿಸಾರಿಕೆ ಎನ್ನೋಣವೇ, ಆವೇಳೆ...ಈ ವ್ಯಕ್ತಿಯನ್ನು ನಾನು enigmatic tantalizing personality ಎಂತೀನೆ ನೀನು ಕವಿ, ಕತೆಗಾರ, ಕನ್ನಡದಲ್ಲಿ ಹೇಳು ನೋಡೋಣ?...ಅಹಹ! ನಮ್ಮ ಪುಣ್ಯವೇ ಪುಣ್ಯ ಕಣಯ್ಯ: ಇಷ್ಟು ದೂರ ಹಿಂಬಾಲಿಸಿದ್ದೂ ಸಾರ್ಥಕ

ವಾಯ್ತು : ಅಕೊ, ಅವಳು ಒಮ್ಮೆ, ಕ್ಷಣಮಾತ್ರ, ಹಿಂದಿರುಗಿ ನೋಡಿ ತನ್ನ ಮುಖದರ್ಶನ ಲಾಭವನ್ನೂ ನಮಗೆ ಕರುಣಿಸಿಬಿಟ್ಟಳು. ನಿನ್ನ ಮೇಲೋ ನನ್ನ ಮೇಲೋ, ಅಂತೂ ನಮ್ಮಿಬ್ಬರಲ್ಲಿ ಒಬ್ಬರ ಮೇಲೆ ಕೃಪಾದೃಷ್ಟಿಯನ್ನು ಬೀರಿದಳು. ಜೊತೆಗೆ ಮುಗುಳ್ನಗೆ; ಪ್ರೋತ್ಸಾಹಕವಾಗಿಯೇ ಕಂಡಿತು ನನಗೆ. ನಾನಂತೂ ಆ ಮುಖದ ಸೌಂದರ್ಯವನ್ನು ವರ್ಣಿಸಲಾರೆ. ನೀನು ಕವಿ, ನಿನ್ನದು ಕ್ಯಾಮೆರಾ ಕಣ್ಣು. ಆಕೆಯ ಮುಖದ ಚೆಲುವನ್ನು ನಿನ್ನ ಸೂಕ್ಷ್ಮಗ್ರಾಹಕಾಕ್ಷಿ ಗ್ರಹಿಸಿದ್ದರೆ, ಕವನರೂಪದಲ್ಲಿ ಅದು ನಿನ್ನ ಹೃದಯದಿಂದ ಹೊರಹೊಮ್ಮಿದಾಗ, ನನಗೂ ಕೊಂಚ ಓದಿ ಹೇಳು. ನೋಡಿ ಆನಂದಪಟ್ಟದ್ದಾಯಿತು, ಕೇಳಿ ಆನಂದಪಡು ತ್ತೇನೆ....ಓಹೋ, ನಮ್ಮ ಅದೃಷ್ಟದ ರೈಲಿನ ಕಡೆಯ ಸ್ಟೇಷನ್ನು ಸಿಕ್ಕಿತು – ವ್ಯಕ್ತಿ ಹೆಂಗಸರಾಸ್ಪತ್ರೆಯ ಒಳಕ್ಕೆ ತಿರುಗಿತು. Patient (ರೋಗಿ) ಇರಲಾರದು; ಡಾಕ್ಟರೋ, ನರ್ಸೋ....profile – ಮುಖದ ಪಕ್ಕನೋಟ ನೋಡೋ, ಹೇಗಿದೆ! ಎಂಥ ಎಸಳಾದ ಮೂಗು! ಏನು, ಕೆನ್ನೆಗೆ ಕೆಂಪು ರಂಗು ಹಚ್ಚಿ ಕೊಂಡಿದ್ದಾಳೆಯೋ ಇಲ್ಲ ಕೆನ್ನೆ ಇರುವುದೇ ಹಾಗೋ! ಅಂತೂ ಕೆನ್ನೆ ಗುಲಾಬಿ ಯರಳಿದಂತೆ ಶೋಭಿಸುತ್ತಿದೆ. ಮುಂಗುರುಳು ನೋಡು, ಗಾಳಿಗೆ ಹೇಗೆ ಹಾರಾಡುತ್ತಿದೆ!....ಆ ಗಾಳಿಯ ಪುಣ್ಯ ನಮಗೆ ದೊರಕಬಾರದೆ?.... ಇದೇನು!....ನೀನೂ ಎಡಕ್ಕೆ ತಿರುಗಿದೆ?....ಇದು ಹೆಂಗಸರಾಸ್ಪತ್ರೆ ಕಣಯ್ಯ.... ಸಾಕು ಹಿಂಬಾಲಿಸಿದ್ದು....ನನ್ನ ಜೊತೆ ಬಾ ಸುಮ್ಮನೆ....ನೋಡು ಇದು ಚೆನ್ನಲ್ಲ....ಯಾರ ಹೆಂಡತಿಯೋ ಏನೋ....ಹೀಗೆ...."

"ನನ್ನ ಹೆಂಡತಿಯೇ ಕಣಯ್ಯ, ವಾಗೀಶ...."

ನನ್ನ ಮಾತು ಮುಗಿಯುವುದರೊಳಗೆ, ಕಣ್ಣುಮುಚ್ಚಿ ಬಿಡುವಷ್ಟರಲ್ಲಿ, ವಾಗೀಶಾಚಾರ್ಯ ತನ್ನ ವಾಹನವನ್ನೇರಿ ಮಾಯವಾಗಿಬಿಟ್ಟ. ತಪ್ಪು ಏನಾ ಗಿದ್ದರೂ ಅವನದಲ್ಲ; ಮೌನವಾಗಿದ್ದುದು ನನ್ನ ತಪ್ಪು.

---

# ಹೆತ್ತವರ ಪುಣ್ಯ.

ನಮ್ಮ ಇಂದಿನ ಸಮಾಜದಲ್ಲಿ ಗಂಡುಮಕ್ಕಳಾದರೆ ಹಿಗ್ಗುವುದೂ, ಹೆಣ್ಣು ಮಕ್ಕಳಾದರೆ ಕುಗ್ಗುವುದೂ ಸರ್ವಸಾಮಾನ್ಯ ರೂಢಿ. ದರಿದ್ರವರ್ಗವಂತೂ ಹೆಣ್ಣುಮಕ್ಕಳೆಂದರೆ ಹಿಡಿ ಶಾಪ ಹಾಕುತ್ತಿರುತ್ತಾರೆ. "ಸರ್ವಂ ಅರ್ಥಮೂಲಂ" ಎಂಬಂತೆ ಈ ಪಕ್ಷಪಾತ ಭಾವನೆಗೂ ಹಣವೇ ಮೂಲ. ಗಂಡುಮಕ್ಕಳಾದರೆ ಕಡೆಗಾಲಕ್ಕೆ ದಿಕ್ಕಾಗುತ್ತಾರೆ, ಹೆಣ್ಣುಮಕ್ಕಳು ಇದ್ದುಬದ್ದುದನ್ನು ಹಿರಿದು ಕೊಂಡು ಹೋಗುತ್ತಾರೆ ಎಂಬುದೇ ಬೃಹತ್ಕುಟುಂಬಿಗರ ಆರ್ಥಿಕ ದೃಷ್ಟಿ. ಬರು ಬರುತ್ತಾ ಈ ಭಾವನೆ, ಈ ದೃಷ್ಟಿ, ಇನ್ನೂ ಬಲಪಡುತ್ತಿದೆ. ಹೆಣ್ಣುಮಕ್ಕಳ ಮದುವೆಯ ವೆಚ್ಚದೊಂದಿಗೆ ಈಗ ವಿದ್ಯಾಭ್ಯಾಸದ ವೆಚ್ಚವೂ ಕೂಡಿಕೊಂಡಿದೆ. ಮದುವೆ ತಡವಾದಂತೆ ವಿದ್ಯಾಭ್ಯಾಸ ಮುಂದುವರಿಯುತ್ತದೆ; ವಿದ್ಯಾವತಿಯಾದ ಹೆಣ್ಣಿನ ಮದುವೆಯ ವೆಚ್ಚವೂ ಕೆಲವು ವೇಳೆ ಇಮ್ಮಡಿಯಾಗುತ್ತದೆ.

ನಾನು ಹೇಳಹೊರಟಿರುವ ಸಂಗತಿಗೂ ಮೇಲಿನ ಹೇಳಿಕೆಗೂ ಸಂಬಂಧ ಅಷ್ಟೇನೂ ಇಲ್ಲ. ಆದರೂ, ಏಕೆ ಹೇಳಿದೆನೆಂದರೆ, ಸುಬ್ಬರಾಯರಿಗೆ ಒಬ್ಬಳೇ ಮಗಳಿದ್ದು ನಾಲ್ವರು ಗಂಡುಮಕ್ಕಳಿದ್ದರೂ ಅವರು ಗಂಡುಮಕ್ಕಳ ಬಗ್ಗೆ ಅಷ್ಟು ಸಂತುಷ್ಟರಾಗಿರಲಿಲ್ಲ. ಸಾಧಾರಣ ಗುಮಾಸ್ತೆಯ ಪದವಿಯನ್ನಲಂಕರಿ ಸಿದ್ದ ಅವರಿಗೆ ಮಕ್ಕಳ ವಿದ್ಯಾಭ್ಯಾಸ ದೊಡ್ಡ ಹೊರೆಯಾಗಿತ್ತು. ಅಲ್ಲದೆ ನುಕ್ಕಳೆಲ್ಲ ತುಂಟ ಮಕ್ಕಳು. ಬಾಲ್ಯದ ತುಂಟತನ, ಬೆಳೆದ ಮೇಲೆ, ಬುದ್ಧಿಯ ಬೆಳಕಾಗಿ ಮಾರ್ಪಡುವುದೆಂಬುದು ಸುಬ್ಬರಾಯರ ಅರಿವಿಗೆ ಬಂದಿರಲಿಲ್ಲವೆಂದು ಕಾಣುತ್ತದೆ. ದಟ್ಟದಾರಿದ್ರ್ಯದಿಂದ ಸಹಜವಾಗಿ ಕ್ಷಣ ಕ್ಷಣಕ್ಕೂ ಚಿಲುಮೆ ಯಂತೆ ಚಿಮ್ಮುವ ಕೋಪ ಪ್ರವಾಹವನ್ನು ಮಕ್ಕಳ ಮೇಲೆ ಹರಿಯಬಿಡುವರು. ಎಲ್ಲರಿಗಿಂತ ಚಿಕ್ಕವಳಾಗಿದ್ದ ಮಗಳು ಅವರ ಕೋಪಕ್ಕೆ ಪಾತ್ರಳಾಗಲು ಕಾರಣ ವಿರಲಿಲ್ಲ. "ಈ ಗಂಡುಮಕ್ಕಳು ಗಡ್ಡೆ ಹತ್ತುವುದಿಲ್ಲ. ಈಗಿನ ಕಾಲದ ಗಂಡು ಮಕ್ಕಳಿಗೆ ಪಿತೃಭಕ್ತಿ ಕೃತಜ್ಞತೆ ಎಲ್ಲಿರುತ್ತದೆ? ಹಾವಿಗೆ ಹಾಲೆರೆದಂತೆ" ಎಂದು ಗೊಣಗುತ್ತಿದ್ದುದನ್ನು ನಾನು ಅನೇಕವೇಳೆ ಕೇಳಿದ್ದೇನೆ.

ಸುಬ್ಬರಾಯರು ನಮ್ಮ ಪಕ್ಕದ ಮನೆಯವರೆ. ಅವರ ಸೋದರಮಾವ

ಶ್ರೀಕಂಠಯ್ಯನವರು ತುಮಕೂರಿನಿಂದ ಕಾರ್ಯಾರ್ಥವಾಗಿ ಇಲ್ಲಿಗೆ ಬಂದಿದ್ದವರು ಸುಬ್ಬರಾಯರ ಮನೆಯಲ್ಲಿಯೇ ಇಳಿದುಕೊಂಡಿದ್ದರು. ನನಗೂ ಅವರ ಪರಿಚಯವಿದ್ದಿತು. ಈ ಸಲ ಅವರು ಬಂದಿದ್ದಾಗ ನಾನು ಹಾಗೇ ಅವರನ್ನು ಮಾತನಾಡಿಸಿಕೊಂಡು ಬರೋಣವೆಂದು ಸುಬ್ಬರಾಯರ ಮನೆಗೆ ಹೋಗಿದ್ದೆ. ನಂಟರಿಷ್ಟರು ಬಂದಾಗ ನಡತೆಯ ನಾಟಕ ಆಡಬೇಕೆಂಬುದು ಮಕ್ಕಳಿಗೆ ಹೇಗೆ ತಿಳಿಯಬೇಕು? ಸುಬ್ಬರಾಯರ ಮಕ್ಕಳು ನಾವು ಮಾತಾಡುವಾಗ ಗಲಭೆ ಮಾಡುತ್ತಿದ್ದರು, ತಾಯನ್ನು ಪೀಡಿಸುತ್ತಿದ್ದರು, ನಮ್ಮಿಬ್ಬರಿಗಾಗಿಯೇ ಮಾಡಿಸಿಕೊಟ್ಟ ಕಾಫಿಯಲ್ಲಿ ಪಾಲುಗೊಳ್ಳಲು ಹುಯಿಲು ಮಾಡುತ್ತಿದ್ದರು. ಸುಬ್ಬರಾಯರ ಕೋಪ ಕನಲಿ ಕೆಂಡವಾಯಿತು. "ನಿಮಗೆ ಬೆಂಕಿ ಬೀಳ. ಆಚೆಗೆ ತೊಲಗಿ" ಎಂದು ಸುಲಭವಾಗಿ ಕೈಗೆ ಸಿಕ್ಕಿದ ಒಬ್ಬ ಹುಡುಗನನ್ನು ಚೆನ್ನಾಗಿ ಹೊಡೆದರು. ಮಕ್ಕಳೆಲ್ಲ ಅಡಿಗೆಯಮನೆ ಹೊಕ್ಕರು. ಆಗ ಶ್ರೀಕಂಠಯ್ಯನವರು ಹೇಳಿದರು :

"ಸುಬ್ಬೂ, ಮಕ್ಕಳು ಏನೇ ಮಾಡಲಿ, ಹೀಗೆ ಬೈದು ಹಾಗೆ ಹೊಡೆಯಬಾರದು. ಈಗ ಅನ್ನದ ಮಕ್ಕಳು, ಆಮೇಲೆ ಚಿನ್ನದ ಮಕ್ಕಳು. ಗಂಡು ಮಕ್ಕಳೇ ಹಾಗೆ. ನಿನಗೆ ತಿಳಿಯದು."

"ಬಿಡಿ ಮಾವಯ್ಯ. ಅದೆಲ್ಲಾ ಪೂರ್ವಕಾಲಕ್ಕಾಯಿತು. ಈಗಿನ ಕಾಲದ ಗಂಡುಮಕ್ಕಳು ತಂದೆ ಸತ್ತರೆ ಶ್ರಾದ್ಧವನ್ನೂ ಮಾಡುವುದಿಲ್ಲ."

"ನಿನಗೆ ತಿಳಿಯದು ಸುಬ್ಬು. ಅತಿವಿದ್ಯೆಯಿಂದ ಬುದ್ಧಿಗೆಟ್ಟ ಮಕ್ಕಳು ಹಾಗೆ ಮಾಡಬಹುದು. ಈಗ ನೀನು ಕಷ್ಟದಲ್ಲಿದ್ದೀಯೆ. ಇನ್ನು ಮೂರು ನಾಲ್ಕು ವರ್ಷ. ನಿನ್ನ ಹಿರಿಯ ಹುಡುಗ ಕೈಗೆ ಬಂದು, ಕೆಲಸಕ್ಕೆ ಸೇರಿ, ನಿನಗೆ ನೆರವಾದರೆ ಅದಕ್ಕಿಂತ ಇನ್ನೇನು ಬೇಕು? ನಮ್ಮ ಊರಿನಲ್ಲಿ ನಡೆದ ಸಂಗತಿ ಕೇಳು. ಆಮೇಲೆ ನಾನು ಹೇಳುವುದು ನಿಜ ಹೌದೇ ಅಲ್ಲವೇ ಎನ್ನುವುದು ನಿನಗೇ ಗೊತ್ತಾಗುತ್ತದೆ. ನೀನೂ ಕೇಳಬೇಕಾದ್ದಯ್ಯ, ಕೇಳು" ಎಂದು ಎದ್ದು ಹೊರಡುವುದರಲ್ಲಿದ್ದ ನನ್ನನ್ನೂ ತಡೆದು ಮುಂದಿನ ಸಂಗತಿ ಹೇಳಿದರು.

"ಮಾದಯ್ಯ ನಮ್ಮ ಆಫೀಸಿನ ಜವಾನ. ಮಲ್ಲವ್ವ ಅವನ ಹೆಂಡತಿ. ನಾಲ್ಕು ಗಂಡುಮಕ್ಕಳು, ಕಡೆಯದು ಒಂದು ಹೆಣ್ಣು. ಅವನ ಸಂಬಳ ತಿಂಗಳಿಗೆ ಹನ್ನೆರಡು. ಮನೆಯಲ್ಲಿ ಮುದುಕ ತಂದೆ ಬೇರೆ. ಐದಾರು ಜನರ ಸಂಸಾರ

ಹೊರೆಯುವುದೆಂದರೆ ಬಾಯಿಮಾತೆ? ಬಹಳ ಕಷ್ಟಪಡುತ್ತಿದ್ದ ಪ್ರಾಣಿ. ಹೆಚ್ಚಿನ ಸಂಪಾದನೆಗಾಗಿ ಸೌದೆ ಒಡೆಯುತ್ತಿದ್ದ, ಬಟ್ಟೆ ಒಗೆಯುತ್ತಿದ್ದ, ಸಿಕ್ಕಿದ ಕೈಕೂಲಿ ಯನ್ನೆಲ್ಲ ಮಾಡುತ್ತಿದ್ದ. ಜೊತೆಗೆ ಗಂಡುಮಕ್ಕಳ ವಿದ್ಯಾಭ್ಯಾಸ ಆಗಬೇಕು. ಹಿರಿಯ ಹುಡುಗನಿಗೆ ಲೊವರ್‌ಸೆಕಂಡರಿ ಪರೀಕ್ಷೆ ಆದಮೇಲೆ ಅವನ ವಿದ್ಯಾ ಭ್ಯಾಸ ನಿಲ್ಲಿಸಿ ಕೆಲಸಕ್ಕೆ ಸೇರಿಸಬೇಕೆಂದು ಯೋಚನೆ ಮಾಡಿದ. 'ಅವನೂ ನಿನ್ನ ಹಾಗೆಯೇ ಜವಾನಿಕೆ ಮಾಡಬೇಕೆ? ಮುಂದಕ್ಕೆ ಓದಿಸು' ಎಂದದ್ದರ ಮೇಲೆ, ಅವನ ವಿದ್ಯಾಭ್ಯಾಸ ಮುಂದುವರಿಸಿದ. ಆದರೆ ಬರುಬರುತ್ತ ತಕ್ಕಡಿ ತೂಗುವುದೆ ಕಷ್ಟವಾಯಿತು. ನನ್ನನ್ನು ಕೇಳದೆ ಅವನು ಯಾವ ಕೆಲಸವನ್ನೂ ಮಾಡುತ್ತಿರಲಿಲ್ಲ; ನನ್ನಲ್ಲಿ ಅವನಿಗೆ ಅದೇನೋ ಅಪ್ಪೊಂದು ನಂಬಿಕೆ, ಭಕ್ತಿ. ಅವನ ಹುಡುಗ ಎಸ್.ಎಸ್.ಎಲ್.ಸಿ. ಪರೀಕ್ಷೆಗೆ ಕುಳಿತುಕೊಳ್ಳಬೇಕಾಗಿತ್ತು; ಆಗ ಅವನಿಗೆ ತುಂಬ ಮುಗ್ಗಟ್ಟಾಯಿತು. ಆಗ ನನ್ನ ಸಲಹೆಯ ಮೇರೆಗೆ ಸಾಲಮಾಡಿ ಒಂದು ಎಮ್ಮೆಯನ್ನು ಕಟ್ಟಿದ; ಎಮ್ಮೆ ಕೊಂಡು ಉಳಿದ ಹಣ ಮಗ ಪರೀಕ್ಷೆಗೆ ಕಟ್ಟಲು ಸಹಾಯವಾಯಿತು. ಮಗನಿಗೆ ಪರೀಕ್ಷೆಯಲ್ಲಿ ತೇರ್ಗಡೆ ಯಾಯಿತು; ಎಮ್ಮೆ ಇದ್ದಕ್ಕಿದ್ದ ಹಾಗೇ ಸತ್ತುಹೋಯಿತು. 'ಇದು ಅದೃಷ್ಟ ಎನ್ನಲೋ ದುರದೃಷ್ಟ ಎನ್ನಲೋ' ಎಂದು ನನ್ನ ಮುಂದೆ ಗೋಳಾಡಿದ. ಪಾಪ, ತಲೆಯ ಮೇಲೆ ಇನ್ನೂರು ರೂಪಾಯಿ ಸಾಲದ ಹೊರೆ ಮಾತ್ರ ಉಳಿಯಿತು! 'ದೇವರ ಚಿತ್ತ ಕಂಡವರಿಲ್ಲ. ಒಂದು ಕಡೆ ಹಿರಿಯುತ್ತಾನೆ, ಇನ್ನೊಂದು ಕಡೆ ಸುರಿಯುತ್ತಾನೆ. ಎದೆಗೆಡಬೇಡ. ಮಗನನ್ನು ಮುಂದಕ್ಕೆ ಓದಿಸು' ಎಂದು ಧೈರ್ಯ ಹೇಳಿದೆ. 'ನಾನು ಎದೆಗೆಡುವುದಿಲ್ಲ ಸ್ವಾಮಿ. ನಮ್ಮಪ್ಪ, ನನ್ನ ಹೆಂಡತಿ ಇಷ್ಟೇ ಸಾಕು ಅಂತಾರೆ. ನನ್ನ ಕಷ್ಟ ಅವರು ನೋಡಲಾರರು, ಅವರ ಕಷ್ಟ ನಾನು ನೋಡಲಾರೆ. ಸಾಲಕ್ಕೆ ಬಡ್ಡಿ ಕಟ್ಟುವುದಕ್ಕೆ ಕೂಡ ಕೈಲಿ ಕಾಸಿಲ್ಲ. ಏನು ಮಾಡಲಿ?' ಎಂದ. ಅವನು ಹೇಳಿದ್ದು ದಿಟ. ನನ್ನ ಗುರುತು ಕಂಡವರಿಂದ ನಾನೇ ಸಾಲ ಕೊಡಿಸಿದ್ದೆ. ಕೊಟ್ಟಷ್ಟನ್ನು ಬಡ್ಡಿಗೆ ಜಮಾ ಕಟ್ಟಿ ಕೊಳ್ಳುವ ಹಾಗೆ ಹೇಳುತ್ತೇನೆ ಎಂದು ಮಾದನಿಗೆ ಭರವಸೆ ಕೊಟ್ಟೆ; 'ಈ ಊರಿನಲ್ಲಿ ಇಂಟರ್‌ಮೀಡಿಯಟ್ ಕಾಲೇಜು ಇದೆ. ಆದ್ದರಿಂದ ಬಲವಂತ ಮಾಡುತ್ತಿದೇನೆ. ನಿನ್ನ ಮಗನಿಗೆ ಇಂಟರ್‌ಮೀಡಿಯಟ್ ಪರೀಕ್ಷೆಯನ್ನಾದರೂ ಮಾಡಿಸಲೇಬೇಕು' ಎಂದು ಬಲವಂತಮಾಡಿದೆ. 'ಅದು ಹೇಗೆ ಮಾಡಿಸ್ತೀರೋ

ನೀವೆ ಮಾಡಿಸಿ ಸ್ವಾಮಿ. ನನ್ನ ಕೈಲಾಗೋದಿಲ್ಲ.' ಎಂದು ನಿಟ್ಟುಸಿರುಬಿಟ್ಟ. ನಮ್ಮ ಅಮಲ್ದಾರರ ಮಕ್ಕಳಿಗೆ ಮನೆಯ ಮೇಷ್ಟರೊಬ್ಬರು ಬೇಕಾಗಿದ್ದರು. ಒಬ್ಬರು ಮೇಷ್ಟರನ್ನು ಗೊತ್ತುಮಾಡಿ ಕೊಡಿ ಎಂದು ನನಗೆ ಹೇಳಿದ್ದರು. ನಾನು ಮಾದಯ್ಯನ ಮಗ ಚಿಕ್ಕಮಾದಪ್ಪನ ವಿಚಾರವನ್ನು ಸಾಹೇಬರಿಗೆ ತಿಳಿಸಿದೆ. ಅವರೂ ಬ್ರಾಹ್ಮಣೇತರರೇ; ಆದರೂ ಅವರಿಗೆ ಬ್ರಾಹ್ಮಣ ಮೇಷ್ಟರೇ ಬೇಕಾಗಿತ್ತು! 'ಕಲಿಸುವ ಕೆಲಸಕ್ಕೆ ಬ್ರಾಹ್ಮಣರೇ ಸರಿ' ಎಂದರು. 'ಸರಸ್ವತಿ ಒಲಿದ ಮೇಲೆ, ಒಕ್ಕಲಿಗ ಬ್ರಾಹ್ಮಣನಾಗುತಾನೆ. ಹುಡುಗನನ್ನು ಕೆಲವು ದಿನ ಪರೀಕ್ಷೆಮಾಡಿ' ಎಂದು ಸಾಹೇಬರನ್ನು ಒಪ್ಪಿಸಿ ಚಿಕ್ಕಮಾದನನ್ನ ಪಾಠ ಹೇಳಲು ಗೊತ್ತುಮಾಡಿಕೊಟ್ಟೆ. ಹುಡುಗನಿಗೆ ಅರ್ಧ ಫೀಜೂ ಮಾಫಾಯಿತು. ಅಂದು ಚಿಕ್ಕಮಾದನ ವಿದ್ಯಾಭ್ಯಾಸ ಮುಂದುವರಿಯಿತು.

"ಇಂಟರ್‌ಮೀಡಿಯಟ್ ಪರೀಕ್ಷೆಗೆ ಕಟ್ಟುವ ಕಾಲ ಬಂತು. ಆಗ ಮಾದಯ್ಯ ಒಂದು ದಿನ ನಮ್ಮ ಮನೆಗೆ ಬಂದು 'ನಿಮ್ಮಿಂದ ಒಂದು ಉಪಕಾರ ಆಗಬೇಕಲ್ಲ' ಎಂದ. 'ಏನು?' ಎಂದೆ. 'ಮಗ ಪರೀಕ್ಷೆಗೆ ಕಟ್ಟಬೇಕು. ನಾಳೆಯೇ ಕಡೆಯ ದಿನವಂತೆ' ಎಂದು ಉದ್ದನೆಯ ಮೋರೆ ಮಾಡಿಕೊಂಡು, ತಲೆಯ ಮೇಲೆ ಕೈಯಿಟ್ಟು ಕುಳಿತುಬಿಟ್ಟ. ನಾನು ಅವನನ್ನೂ ಕರೆದುಕೊಂಡು ಅಲೆದೆ; ಮೂರು ಕಾಸೂ ಹುಟ್ಟಲಿಲ್ಲ. ರಾತ್ರಿಯಾಗಿತ್ತು; 'ದೇವರಿದ್ದಾನೆ, ನೋಡೋಣ. ನಾಳೆ ಬೆಳಗ್ಗೆ ಬಾ' ಎಂದು ಮಾದನನ್ನು ಕಳಿಸಿಕೊಟ್ಟೆ.

"ಮಾರನೆಯ ಬೆಳಗ್ಗೆ ನಾನು ಏಳುವುದಕ್ಕೆ ಮೊದಲೇ ಮಾದ ಬಂದು ಸಿದ್ಧನಾಗಿದ್ದ. 'ಸ್ನಾನ ಮಾಡಿಬಿಡುತ್ತೇನೆ. ಸ್ವಲ್ಪ ಕುಳಿತುಕೋ. ಆಮೇಲೆ ಹೊರಡೋಣ' ಎಂದೆ. 'ಎಲ್ಲೂ ಹೊರಡುವುದು ಬೇಕಿಲ್ಲ ಸ್ವಾಮಿ. ಸ್ವಲ್ಪ ನಮ್ಮ ಮನೆ ಕಡೆ ಬನ್ನಿ' ಎಂದ. 'ಏನೋ, ಸಮಾಚಾರ?' ಎಂದೆ. 'ಏನೂ ಇಲ್ಲ. ನಾನು ಕೈಯೊಡ್ಡಿ ತಿರುಗಲಾರೆ. ಮಾರೋಣ ಎಂದರೆ ನನ್ನ ಹೆಂಡಿರ ಕಿವಿ ಓಲೆ ಬಿಟ್ಟರೆ ಇನ್ನೇನೂ ಇಲ್ಲ. ಕೇಳಿದರೆ ಕೊಟ್ಟಾಳೋ ಇಲ್ಲವೋ. ಕೊಡ್ತಾಳೋ ಬಿಡ್ತಾಳೋ, ನನಗನಕ ಕೇಳೋಕೆ ಬಾಯೆ ಬರಲಿಲ್ಲ. ಹೆಂಡರು ಅಂದ್ರೆ ಕತ್ತಿಗೊಂದು ತಾಳಿ, ಕಿವಿಗೆರಡು ಓಲೆ. ಗಂಡ ಅನ್ನಿಸಿಕೊಂಡೋನು ಅದು ಹೇಗೆ ಕೇಳೋದು ಸ್ವಾಮಿ? ಮಗನ ಪರೀಕ್ಷೆಗೆ ಹಣ ಬೇಕು ಅಂದರೆ ಅವಳಿಗೇನು ಗೊತ್ತಾಗುತ್ತೆ? ಗಂಡ ಎಲ್ಲೋ ಜೂಜಾಡ್ತಾನೆ, ಹಾದರ

ಮಾಡ್ತಾನೆ, ಅದಕ್ಕೆ ಓಲೆ ಕೇಳ್ತಾನೆ ಅಂದುಕೊಳ್ತಾಳೆ. ನಿಮ್ಮ ಮಾತು ಅಂದರೆ ದೇವರ ಮಾತು. ತಪ್ಪೊ ತಿಳಿದುಕೊಳ್ಳೋದಿಲ್ಲ, ಕೊಟ್ಟೊ ಕೊಡ್ತಾಳೆ. ಒಂದು ಹೆಜ್ಜೆ ಮನೆ ಕಡೆ ಬನ್ನಿ ಸ್ವಾಮಿ' ಎಂದು ಬೇಡಿಕೊಂಡ. ಬೇರೆ ದಾರಿ ಇಲ್ಲದ್ದ ರಿಂದ ಇದೇ ಸರಿ ಎಂದು ನಾನು ಅವನ ಜೊತೆ ಹೊರಟೆ.

"ನಾನೇ ಬಡವ ಎಂದುಕೊಂಡಿದ್ದೆ. ಮಾದನ ಮನೆ, ಅವನ ಮಕ್ಕಳ ಬಟ್ಟೆ ಇವನ್ನೆಲ್ಲ ನೋಡಿ ಬಡತನದ ಆಳ ಎಲ್ಲಿಯವರೆಗೆ ಹೋಗಬಹುದು ಎನ್ನುವುದು ನನಗೆ ಗೊತ್ತಾಯಿತು. ಅಷ್ಟು ಬಡತನವಾದರೂ ಮನೆಯ ಒಪ್ಪ ಓರಣ ನೋಡಿ ನನಗೆ ಸಂತೋಷವಾಯಿತು. ಮನೆಯ ಮುಂದನ್ನೂ ಒಳಗನ್ನೂ ಚೆನ್ನಾಗಿ ಸಾರಿಸಿ ರಂಗೋಲಿ ಹಾಕಿತ್ತು. ಇದ್ದ ಒಂದೆರಡು ಬಿಂದಿಗೆ ಚೆಂಬು ಗಳು ಕನ್ನಡಿಯ ಹಾಗೆ ಬೆಳಗುತ್ತಿದ್ದವು. ಮಕ್ಕಳ ಬಟ್ಟೆಗಳು ಚಿಂದಿ ಚಿಂದಿ ಯಾದರೂ ಚೊಕ್ಕಟವಾಗಿದ್ದುವು. ಇದನ್ನು ನೋಡಿ ನನಗೆ ಮಲ್ಲವ್ವ ಗಂಡ ಮಕ್ಕಳಿಗಾಗಿ ಏನು ಬೇಕಾದರೂ ಮಾಡಲು ಸಿದ್ಧ ಎಂದು ತೋರಿ ನನಗೆ ಅವ ಳೊಡನೆ ಮಾತಾಡಲು ಸ್ವಲ್ಪ ಧೈರ್ಯ ಬಂತು. 'ಸ್ವಾಮಿಗಳು ಬಂದಿದ್ದಾರೆ. ಬಾ ಮಲ್ಲಿ' ಎಂದು ಮಾದ ಕರೆದ. ನಾನು ನಿಂತೇ ಇದ್ದೆ; ಮಲ್ಲವ್ವ ಬಂದಳು. ಅವಳು ಉಟ್ಟ ಸೀರೆಯಲ್ಲಿ ಸುಮಾರು ನೂರು ಗಂಟುಗಳು, ಇನ್ನೂರು ತೇಪೆಯ ಹೊಲಿಗೆ ಇದ್ದುವು. 'ಸ್ವಾಮಿಗಳು ನಿಂತೇ ಇದ್ದಾರಲ್ಲ. ಚಾಪೆ ಇಲ್ದೆ ಹೋದರೆ ಕಂಬಳೀನಾದರೂ ಹಾಸಬಾರ್ದ' ಎಂದು ಒಂದು ಹರಕಲು ಕಂಬಳಿ ತಂದು ಹಾಸಿ ನನಗೆ ಕುಳಿತುಕೊಳ್ಳಹೇಳಿದಳು. 'ಏನು ಬುದ್ಧಿ. ದೇವರು ಬಂದ ಹಾಗೆ ಬಂದ್ರಿ' ಎಂದಳು. 'ದೇವರು ಬಂದಿರೋದು ಕಿತ್ತುಕೊಳ್ಳೋಕೆ, ಕೊಡೋಕಲ್ಲ, ಮಲ್ಲಮ್ಮ' ಎಂದೆ. 'ಏನು?' ಎಂದಳು. 'ನೋಡು, ನಿನ್ನ ಮಗ ಪರೀಕ್ಷೆಗೆ ಕಟ್ಟಬೇಕು. ಅದಕ್ಕೆ ಮೂವತ್ತು ರೂಪಾಯಿ ಬೇಕು. ನಿನ್ನ ಗಂಡ ಈಗಾ ಗಲೇ ಸಾಲಗಾರನಾಗಿದಾನೆ. ಎಲ್ಲೂ ಸಾಲ ಹುಟ್ಟುವುದಿಲ್ಲ. ನಿನ್ನ ಕಿವಿಯ ಓಲೆ ಕೊಟ್ಟರೆ ಮಗ ಪರೀಕ್ಷೆಗೆ ಕಟ್ಟಿ ಪ್ಯಾಸು ಮಾಡ್ತಾನೆ. ನಾನು ಬಲವಂತ ಮಾಡುವುದಿಲ್ಲ. ನಿನ್ನ ಗಂಡನಿಗೆ ಓಲೆ ಕೊಟ್ಟೀಯಾ?' ಎಂದು ಕೇಳಿದೆ. ಮಲ್ಲವ್ವ ಮರುಮಾತಾಡಲಿಲ್ಲ: ಕಿವಿಗೆ ಕೈಹಾಕಿದಳು; ಓಲೆಗಳನ್ನು ತೆಗೆದು ಕೊಟ್ಟಳು. ಕೊಟ್ಟಾದ ಮೇಲೆ ಇಷ್ಟೇ ಹೇಳಿದಳು: "ನನ್ನ ಗಂಡನಿಗೆ ಒಸಿ ಬುದ್ಧಿ ಹೇಳಿ ನನ್ನೊಡೆಯಾ. ನನ್ನ ಮೇಲೆ ಈಟೊಂದು ಅಪನಂಬಿಕೆ ಆದರೆ

ಹ್ಯಾಗೆ? ಅವನೇ ಕೇಳಿದ್ದರೆ ನಾನು ಕೊಡ್ತಾ ಇರಲಿಲ್ವಾ? ಓಲೆ ಅಲ್ಲ, ಕಿವಿ ಕುಯ್ದುಕೊಡು ಅಂದಿದ್ರೂ ಕೊಡ್ತಾ ಇದ್ದೆ. ನಮಗೋಸ್ರ ಅವರು ಜೀವ ತೆಯ್ತಾ ಇಲ್ವಾ?" ಯಾವ ಜಾತಿಯವರಲ್ಲೇ ಆಗಲಿ, ಎಷ್ಟು ಜನ ಹೆಂಡಿರು ಈ ಮಾತು ಹೇಳುವವರು? – ಎಂದು ಆಶ್ಚರ್ಯವಾಯಿತು.

"ಓಲೆಗೆ ನಲವತ್ತು ರೂಪಾಯಿ ಬೆಲೆ ಬಂತು. ಮೂವತ್ತು ರೂಪಾಯಿ ಪರೀಕ್ಷೆಗೆ ಕೊಡಿಸಿ, ಉಳಿದ ಹತ್ತು ರೂಪಾಯಿಗೆ ಹೆಂಡತಿಗೆ ಎರಡು ಸೀರೆ ತೆಗೆದುಕೊಡುವ ಹಾಗೆ ಮಾದನಿಗೆ ಹೇಳಿದೆ. ಅವನು ಹಾಗೇ ಮಾಡಿದ.

"ಚಿಕ್ಕಮಾದ ಪರೀಕ್ಷೆಯಲ್ಲಿ ಪ್ಯಾಸು ಮಾಡಿದ. ಅವನ ವಿದ್ಯ, ಬುದ್ಧಿ, ವಿನಯಗುಣ ಇವನ್ನು ಅರಿತುಕೊಂಡು ನಮ್ಮ ಸಾಹೇಬರು ಅವನನ್ನು ಮೆಚ್ಚಿ ಕೊಂಡಿದ್ದರು. ಅವರ ಮೆಹನತ್ತಿನಿಂದ ಅವನಿಗೆ ಡಿಸ್ಟ್ರಿಕ್ಟ್ ಆಫೀಸಿನಲ್ಲಿ ಹುದ್ದೆಯೂ ಸಿಕ್ಕಿತು. ಈಗ ಅವನಿಗೆ ನಲವತ್ತು ರೂಪಾಯಿ ಸಂಬಳ. ಕೆಲಸ ದೊರೆತ ಮೇಲೆ ಮೊದಲು ಅವನು ತಾಯಿಗೆ ಒಂದು ಜೊತೆ ಓಲೆ ತಂದು ಕೊಟ್ಟ; ತಂದೆ ಮಾಡಿದ್ದ ಸಾಲ ತೀರಿಸಿದ. ಈಗ ತಮ್ಮಂದಿರನ್ನು ಓದಿಸು ವುದಕ್ಕೆ ಸಹಾಯ ಮಾಡುತ್ತಿದಾನೆ."

ಶ್ರೀಕಂಠಯ್ಯನವರು ಹೇಳಿದ ಈ ಸಂಗತಿ ಕೇಳಿ ಸುಬ್ಬರಾಯರು ತುಸ ಹೊತ್ತು ಮೌನವಾಗಿದ್ದರು. ಆಮೇಲೆ, "ಹೆತ್ತವರ ಪುಣ್ಯ. ಮುಖ್ಯವಾಗಿ, ಆ ಪತಿವ್ರತೆ ಮಲ್ಲಮ್ಮನ ಪುಣ್ಯ. ನಾವೂ ಆ ಪುಣ್ಯ ಮಾಡಿರಬೇಕಲ್ಲ" ಎಂದರು.

"ಅದನ್ನು ಕಂಡವರು ಯಾರು? ನಮ್ಮ ಕರ್ತವ್ಯ ನಾವು ಮಾಡಬೇಕು" ಎಂದರು ಶ್ರೀಕಂಠಯ್ಯನವರು.

ಬಾಳನ್ನು ನಿರುಕಿಸಿ ನೋಡಿ ಅದರಿಂದ ಪಾಠ ಹೇಳಬಲ್ಲವರಾಗಿದ್ದ ಶ್ರೀಕಂಠಯ್ಯನವರು ಜ್ಞಾನಿಗಳಾಗಿ ತೋರಿದರು ನನಗೆ.

# ಊಹೆ ನಿಜವಾದರೆ ?

ಮೋಹಿನಿ ಸರ್ವಾಲಂಕಾರ ಭೂಷಿತೆಯಾಗಿ ಪತಿಯನ್ನು ಸ್ವಾಗತಿಸಲು ಸಿದ್ಧಳಾಗಿ ಮನೆಯ ಮುಂಭಾಗದಲ್ಲಿ ನಿಂತಿದ್ದಾಳೆ. ಸರ್ವಾಲಂಕಾರವೆಂದರೆ ಏನೇನೋ ಕಲ್ಪಿಸಿಕೊಳ್ಳಬೇಡಿ, ದಯವಿಟ್ಟು. ಮೋಹಿನಿ ಅಲಂಕಾರ ಪ್ರಿಯೆಯಾದರೂ ಹದವರಿತು ಸಿಂಗರಿಸಿಕೊಳ್ಳುವ, ಹೆಣ್ಣಿಗೆ ಸಹಜವಾದ ಕಲೆಯಲ್ಲಿ ಸಿದ್ಧಿಯನ್ನು ಪಡೆದವಳು. ಅವಳ ಅಲಂಕಾರ ಅತಿ ಹಿಂದಿನ ಕಾಲದ್ದೂ ಅಲ್ಲ, ಅತಿ ಈಗಿನ ಕಾಲದ್ದೂ ಅಲ್ಲ. ಅವಳ ಹೆಸರನ್ನು ಕೇಳಿ ಅತ್ಯಾಧುನಿಕ ರಮಣಿ ಎಂದು ನೀವು ಎಣಿಸಬಹುದು. ಆದರೆ, ಅವಳು ಹುಟ್ಟಿ ಇಪ್ಪತ್ತೈದು ವರ್ಷವಾಗಿದೆ, ನೋಡಿ. ಆದ್ದರಿಂದ, ಹೆಚ್ಚು ಕಡಮೆ, ಹತ್ತು ಹದಿನೈದು ವರ್ಷಗಳ ಹಿಂದಿನ ಆಚಾರ-ವಿಚಾರ-ಅಲಂಕಾರಗಳ ಮುದ್ರೆ ಅವಳ ಸ್ವರೂಪದಲ್ಲಿ ಅಂಕಿತವಾಗಿದೆ. ಗಳಿಗೆ ಗಳಿಗೆಗೂ ಬದಲಾಗುವ, ಮುಂದುವರಿದ ಕಾಲೇಜು ಕನ್ಯಾಮಣಿಗಳ ಸಿನಿಮಾ ಫ್ಯಾಷನ್ನಿನ ಸುಳಿಗಾಳಿಯ (ಬಿರುಗಾಳಿಯೆಂದು ಕೊಳ್ಳಿ, ಬೇಕಾದರೆ) ಪ್ರಭಾವಕ್ಕೆ ಅವಳಿನ್ನೂ ಸಿಲುಕಿಲ್ಲ. ದೈವದತ್ತವಾದ ಸಹಜ ಸೌಂದರ್ಯವೊಂದೇ ಅವಳ ಮೋಹಕ ಗುಣ; ಅಲಂಕಾರವಲ್ಲ. ತಂದೆ ತಾಯಿ ಅವಳಿಗಿಟ್ಟಿದ್ದ ಹೆಸರು ಸಾರ್ಥಕವಾಗಿದೆ.

ಮಧ್ಯಮವರ್ಗದಲ್ಲಿಯೂ ಅತ್ಯಂತ ಕೆಳಮಟ್ಟದ ಸಂಸಾರವೊಂದಕ್ಕೆ ಬೀದಿಯಕಡೆಯ ಮುಂಬಾಗಿಲಿನ ಸೌಕರ್ಯ ದೊರೆಯುವುದೂ ಅದೃಷ್ಟವೆ! ಮೋಹಿನಿಯ ಗಂಡ ಗೋಪಾಲಕೃಷ್ಣನ ಸ್ನೇಹಿತರು ವೆಂಕಟರಾಯರ ಕೃಪೆಯಿಂದ, ಅವರ ಮನೆಯ ಒಂದು ಪಕ್ಕದ ಭಾಗವೆಲ್ಲ ಕಡಮೆಯ ಬಾಡಿಗೆಗೆ ಇವರಿಗೆ ದೊರಕಿತ್ತು.

ಮೋಹಿನಿ ಗೇಟಿನ ಹತ್ತಿರ ನಿಂತಾಗ ಒಳಗಿನಿಂದ ವೆಂಕಟರಾಯರ ಹೆಂಡತಿ, ಸ್ಥೂಲಕಾಯದ ಸುಭದ್ರಮ್ಮನವರು, ಮಂದಗಮನದಿಂದ ಬಂದು ಬಳಿ ನಿಂತರು.

“ಏನಮ್ಮಾ, ನಾನೂ ನಿನ್ನ ಕೂಡ ನಿಂತಿರಬಹುದೊ, ಇಲ್ಲ....”

" ಇದೇನು ಸುಭದ್ರಮ್ಮನವರೆ, ಹೀಗೆ ಕೇಳುತ್ತೀರಿ ? ನಿಮ್ಮ ಮನೆಯ ಮುಂದೆ ನಿಂತುಕೊಳ್ಳುವುದಕ್ಕೆ ನನ್ನ ಅಪ್ಪಣೆಯಾಗಬೇಕೇ ?"

" ಹಾಗಲ್ಲಮ್ಮ, ಇವೊತ್ತು ಒಂದನೆಯ ತಾರೀಕಲ್ಲವೇ ? ಸಂಬಳದ ದಿನ. ಸಿನಿಮಾನೋ ಲಾಲ್‌ಬಾಗೋ....ಯಜಮಾನರನ್ನ ಎದುರುಗೊಳ್ಳಲು ಸಿದ್ಧವಾಗಿದೀಯಮ್ಮ, ಅಲಂಕಾರವೂ ನಿತ್ಯಕ್ಕಿಂತ ರವಷ್ಟು ಹೆಚ್ಚಾಗೇ ಇದೆ...."

" ಅಂಥದೇನೂ ಇಲ್ಲವಲ್ಲ...." ತಲೆ ಮುಟ್ಟಿಕೊಂಡಳು ಮೋಹಿನಿ, ಮುಗುಳುನಗೆ ತುಳುಕಿಸುತ್ತ.

" ಅಲ್ಲೆ, ಹೆಚ್ಚಿಗೆ ಇರೋದು – ತುರುಬು ಹಾಕಿಕೊಂಡಿದ್ದೀ, ಕನಕಾಂಬರದ ಹೂವಿನ ದಂಡೆ ಮುಡಿದಿದ್ದೀ, ಅದರ ಮೇಲೆ ಒಂದೇ ಒಂದು ರೋಜ ಹೂವು...."

" ನೀವು ಕೊಟ್ಟದ್ದೆ....ನಿಮ್ಮ ಮನೆಯ ಗಿಡದ್ದು...."

" ಕನಕಾಂಬರ ಕೊಂಡದ್ದು...."

ಇಬ್ಬರೂ ಗೊಳ್ಳನೆ ನಕ್ಕರು.

ಅಷ್ಟು ಹೊತ್ತಿಗೆ, ಕಾಲೇಜಿನಿಂದ ಆಗತಾನೆ ಹಿಂದಿರುಗಿದ್ದ ಲೀಲಾವತಿ – ಸುಭದ್ರಮ್ಮನವರ ಮಗಳು, ಗುಬ್ಬಳಿಸುವ ಪಾರಿವಾಳದಂತೆ ವೈಯಾರದಿಂದ ಮನೆಯೊಳಕ್ಕೆ ಹೋದಳು.

ಅವಳನ್ನೆ ಹಿಂಬಾಲಿಸುತ್ತಿದ್ದ ಇಬ್ಬರು ಮೂವರು ಯುವಕರು, ತಮ್ಮ ದೃಷ್ಟಿಯನ್ನೂ ಅವಳ ಹಿಂದೆಯೇ ಅಟ್ಟಿ, ಅವಳು ಕಣ್ಮರೆಯಾದ ಮೇಲೆ ಅದನ್ನು ಕ್ಷಣಕಾಲ ಮೋಹಿನಿಯ ಮೇಲೂ ಹರಿಯಬಿಟ್ಟು, ಮನಸ್ಸಿಲ್ಲದ ಮನಸ್ಸಿನಿಂದ ಮುಂದುವರಿದರು.

ಎರಡು ಕ್ಷಣ ಬಿಟ್ಟು, ಅವರ ಹಿಂದೆಯೇ ಇನ್ನೊಬ್ಬರು – ಜರಿಯ ಪೇಟ ಧರಿಸಿದ್ದ ಸಂಭಾವಿತರು – ಈ ಬೀದಿಗೆ ಅಪರಿಚಿತರು – ಮೋಹಿನಿಯನ್ನು ದುರುಗುಟ್ಟಿ ನೋಡಿಯೂ ತೃಪ್ತರಾಗದೆ ಹಿಂತಿರುಗಿ ಹಿಂತಿರುಗಿ ನೋಡ ನೋಡುತ್ತ ಮುಂದುವರಿದರು.

" ಅಲ್ಲ, ಹುಡುಗರು ಮುದುಕರು ಎಲ್ಲಾ ಒಂದೇ ಆದರಲ್ಲಾ ಅಂದ್ರೆ ! ಅದು ಹೇಗೆ ನಮ್ಮನ್ನ ದುರುಗುಟ್ಟಿಕೊಂಡು ನೋಡುತ್ತ ಹೋದರು ಅಂತೀರಿ ?"

" ಹುಡುಗರು ಮುದುಕರೇನು, ಗಂಡು ಜಾತೀನೆ ಹಾಗೆ ಕಣಮ್ಮ.

ಮನೇಲಿ ಮುತ್ತಿನಂಥ ಹೆಂಡತಿ ಇದ್ದರೂ ಕಂಡ ಕಂಡ ಹೆಣ್ಣಿಗೆಲ್ಲಾ ಕಣ್ಣು ಹಾಕ್ತಾರೆ. ಅವಕಾಶ ಸಿಕ್ಕಿದರೆ ಕೆಡಿಸೋಕೂ ಹೇಸೋದಿಲ್ಲ. ಥಳಕು ಪಳಕು ಇಲ್ಲದ ನಿನ್ನನ್ನೇ ಹೀಗೆ ನೋಡಿದರಲ್ಲಾ, ನಮ್ಮ ಲೀಲಾ ಅಂಥವರನ್ನ ಅವಕಾಶ ಸಿಕ್ಕಿದರೆ ನುಂಗೇ ಬಿಡುತ್ತಾರೆ. ಹೀಗೆ ಮೆರೀಬೇಡವೇ ಅಂತ ಬಡುಕೊಳ್ಳು ತಾನೇ ಇರುತೀನಿ, ಅವಳು ಕೇಳೋದಿಲ್ಲ."

"ನೀವು ಹೇಳೋದು ನಾನು ಒಪ್ಪೋದಿಲ್ಲ ಅಂದ್ರೆ."

"ನೀನೇನೂ ಮನಸ್ಸಿನಲ್ಲಿ ನೊಂದುಕೊಳ್ಳಬೇಡಾ ಅಮ್ಮಾ. ಅಲಂಕಾರವೇ ಮಾಡಿಕೊಳ್ಳಬಾರದು ಅಂತ ಅಲ್ಲ, ನಾನು ಹೇಳಿದ್ದು. ಹೆಂಗಸು ಎಷ್ಟೇ ರೂಪವಂತಳಾದರೂ ಅಲ್ಪ ಸ್ವಲ್ಪ ಅಲಂಕಾರ ಮಾಡಿಕೊಳ್ಳದೆ ಹೋದರೆ ಗಂಡನ ಮನಸ್ಸನ್ನು ಒಲಿಸಿಕೊಳ್ಳುವುದಕ್ಕೆ ಆಗುವುದಿಲ್ಲ. ಹುಚ್ಚು ಅಲಂಕಾರ ಬೇಡ ಅಂತ ನಾನು ಲೀಲಾಗೆ ಹೇಳುವುದು...."

"ಅಲಂಕಾರದ ವಿಚಾರ ಅಲ್ಲ ನನ್ನ ಮನಸ್ಸಿನಲ್ಲಿರುವುದು. ಅದೇನೋ ಎಲ್ಲಾ ಗಂಡಸರೂ ಒಂದೇ ಎಂದಿರಲ್ಲ, ಅದನ್ನ ನಾನು ಒಪ್ಪುವುದಿಲ್ಲ."

"ಎಲ್ಲರೂ ನಿನ್ನ ಯಜಮಾನರ ಹಾಗೇ ಇರುತ್ತಾರೆಯೇ ತಾಯಿ? ಮುಚ್ಚು ಮರೆ ಏನು, ನನ್ನ ಯಜಮಾನರೇ ಮೂವತ್ತರ ಪ್ರಾಯದಲ್ಲಿ....ಸರಿ, ಸರಿ....ಅದನ್ನ ಹೇಳುತ್ತಾ ಹೋದರೆ ಅದೇ ಒಂದು ಕಥೆ. ಒಟ್ಟಿನಮೇಲೆ ಹೆಂಡತಿಯಾದೋಳು ತುಂಬಾ ಎಚ್ಚರಿಕೆಯಾಗಿರಬೇಕು. ಗೊತ್ತಾಗದ ಹಾಗೆ ಗಂಡನ ಮೇಲೆ ಹತೋಟಿ ಇಟ್ಟುಕೊಳ್ಳಬೇಕು. ನಗುನಗುತಾನೇ ನಡತೇನ ಪರೀಕ್ಷೆ ಮಾಡುತ್ತಿರಬೇಕು. ನಿನಗೆ ಹೇಳಿಕೊಡಬೇಕೇ ತಾಯಿ? ನೀನು ಬುದ್ಧಿವಂತೆ. ಗಂಡನಿಗೆ ಅದೇನೋ ಮಂತ್ರ ಹಾಕಿಬಿಟ್ಟದ್ದಿ. ಕಚೇರಿ ಬಿಟ್ಟ ಕೂಡಲೆ ಅತ್ತಲಾಗಿ ಇತ್ತಲಾಗಿ ಸುಳಿಯದೆ ನೇರವಾಗಿ ಮನೆಗೆ ಬಂದು ಬಿಡುತಾರೆ, ಆರು ಗಂಟೆ ಹೊತ್ತಿಗೆ....ಸರಿ, ನಾನಿನ್ನು ಬರ್ತೀನಿ. ನಿನ್ನ ಯಜಮಾನರನ್ನ ಎದುರುಗೊಳ್ಳೋಳು ನೀನು ತಾನೆ, ನಾನಲ್ಲವಲ್ಲ" ಎಂದು ಸುಭದ್ರಮ್ಮನವರು ನಗುನಗುತ್ತ ಒಳಕ್ಕೆ ನಡೆದರು.

ಸುಭದ್ರಮ್ಮನವರು ಹೇಳಿದಂತೆ ಗೋಪಾಲಕೃಷ್ಣ ನಿತ್ಯ ಸಾಧಾರಣವಾಗಿ ಆರು ಗಂಟೆಯ ಹೊತ್ತಿಗೆ ಮನೆಗೆ ಬಂದುಬಿಡುತ್ತಿದ್ದ. ಆದರೆ, ಮೋಹಿನಿ ನಿತ್ಯವೂ ಆ ಹೊತ್ತಿಗೆ ಮನೆಯ ಮುಂದೆ ಇಂದಿನ ಹಾಗೆ ಗಂಡನ ಆಗಮನ

ನಿರೀಕ್ಷೆಯಲ್ಲಿ ನಿಂತಿರುತ್ತಿರಲಿಲ್ಲ. ಸಿನಿಮಾಕ್ಕೋ ಲಾಲ್‌ಬಾಗಿಗೋ ಮತ್ತೆಲ್ಲಿಗಾದರೋ ಇಬ್ಬರೂ ಹೋಗುವುದೆಂದು ಮೊದಲೇ ಏರ್ಪಾಡಾಗಿದ್ದ ದಿನಗಳಲ್ಲಿ ಮಾತ್ರ ಅವಳು ಹೀಗೆ ಸರ್ವಸಿದ್ಧಳಾಗಿ ನಿಂತಿರುತ್ತಿದ್ದಳು. ಗಂಡನನ್ನು ಎದುರುಗೊಳ್ಳಬೇಕೆಂಬ ಕಾತುರಕ್ಕಿಂತ ಹೆಚ್ಚಾಗಿ ಹೊರಕ್ಕೆ ಹೊರಡಬೇಕೆಂಬ ಆತುರವೇ ಕಾರಣ, ಅವಳು ಹಾಗೆ ಬೀದಿಯ ಬಾಗಿಲಲ್ಲಿ ನಿಲ್ಲಲು.

ಆರಾಯಿತು, ಆರೂವರೆಯೂ ಆಯಿತು. ಎದುರು ಸಾಲಿನ ಎರಡು ಮೂರು ಮಹಡಿಯ ಮನೆಗಳ ಮೇಲೆ ಪಸರಿಸಿದ್ದ ಮುಳುಗುವ ಸೂರ್ಯನ ಹೊಂಬೆಳಕು ಕೆಂಬೆಳಕಾಗಿ, ಕಣ್ಣುಮುಚ್ಚಿ ಬಿಡುವಷ್ಟರಲ್ಲಿ ಅದೂ ಮಾಸಿ, ಕಾವಳ ಮುಸುಕತೊಡಗಿತು. ಗೋವಳಿಗರು ತಮ್ಮ ಗಿರಾಕಿಗಳ ಮನೆಗೆ ಹಾಲು ಕರೆದು ಹಸುಗಳನ್ನು ಹಿಂದಕ್ಕೆ ಹೊಡೆದುಕೊಂಡು ಹೋಗುತ್ತಿದ್ದರು. ಮೋಹಿನಿಯ ಮನೆಯ ಕವಾಡಿಗನೂ ಹಾಲು ತಂದನು. ಮೋಹಿನಿ ಒಳಕ್ಕೆ ಹೋಗಿ ಪಾತ್ರೆ ತಂದು, ಹಾಲು ಹಾಕಿಸಿಕೊಂಡು, ಮತ್ತೆ ಒಳಕ್ಕೆ ಹೋದಳು. ಒಳ್ಳೆಯದೇ ಆಯಿತು, ಕಾಫಿಗೆ ಹೊಸ ಹಾಲೇ ಹಾಕಿದರಾಯಿತು, ಎಂದುಕೊಂಡಳು.

ಕತ್ತಲೆಯ ತೆರೆ ಇಳಿಯಿತು. ಬೀದಿಯ ದೀಪಗಳೂ ಹೊತ್ತಿಕೊಂಡುವು.

ಅಗ್ಗಿಷ್ಟಿಕೆಯ ಕೆಂಡ ಕಳಲಿಹೋಗಿ, ತಣ್ಣಗಾಗಿ, ಅದರ ಮೇಲೆ ಮುಚ್ಚಿ ಇರಿಸಿದ್ದ ಕಾಫಿಯ ಡಿಕಾಕ್ಷನ್ನೂ ತಣ್ಣಗಾಗಿತ್ತು. ಐದೂ ಮುಕ್ಕಾಲರ ಹೊತ್ತಿಗೆ ಕರಿದು ಮುಗಿಸಿದ್ದ ಬೋಂಡವಂತೂ ಆರಿಹೋಗಿ ಮೆತ್ತಗಾಗಿತ್ತು. ಮೋಹಿನಿ ಮತ್ತೆ ಹೊಸದಾಗಿ ಕೆಂಡ ಮಾಡಿದಳು, ಅದರ ಮೇಲೆ ಹಾಲು ಕಾಯಲಿಟ್ಟಳು ; ಮುಂದುಗಡೆಯ ಕೋಣೆಯಲ್ಲಿ ( ಗೋಪಾಲಕೃಷ್ಣನ ಡ್ರಾಯಿಂಗ್ ರೂಮ್ ) ದೀಪದ ಸ್ವಿಚ್ ಹಾಕಿ, ಕುರ್ಚಿಯ ಮೇಲೆ ಕುಳಿತು, ಆಗತಾನೆ ಬಂದಿದ್ದ 'ತಾಯಿನಾಡು'ವನ್ನು ಕೈಗೆ ತೆಗೆದುಕೊಂಡಳು.

ರಾಜಕೀಯದ ಸುದ್ದಿಗಳಲ್ಲಿ ಆಸಕ್ತಿಯಿಲ್ಲ. ಯಾರದ್ದೋ ಕೊಲೆ ; ಯಾರದ್ದೋ ಆತ್ಮಹತ್ಯೆ ; ಯಾವುದೋ ಕನ್ಯಾಪಹಾರ ಮೊಕದ್ದಮೆ ; ಯಾರೋ ಗಣ್ಯವ್ಯಕ್ತಿಗಳು....ಯಾವಳ ಮಾನಭಂಗವನ್ನೋ ಮಾಡ ಪ್ರಯತ್ನಿಸಿ........ ಸುಭದ್ರಮ್ಮನವರು ಹೇಳಿದ್ದು ದಿಟ....ಗಂಡು ಜಾತಿಯೇ ಹೀಗೆ....

ಇಷ್ಟು ಹೊರತು, ಪತ್ರಿಕೆಯಲ್ಲಿ ಏನೂ ಸ್ವಾರಸ್ಯವಿಲ್ಲ....ಅವರು ಯಾಕೆ

ಇನ್ನೂ ಬರಲಿಲ್ಲ? ಸಂಬಳ ಬರಲಿಲ್ಲವೆ? ಆದರೂ, ಮನೆಗೆ ತಡ ಎಂದರೂ ಏಳು ಗಂಟೆಯ ಹೊತ್ತಿಗಾದರೂ ಬರಬೇಕಾಗಿತ್ತಲ್ಲ? ಒಬ್ಬರೇ ಸಿನಿಮಾಕ್ಕೆ ಹೋಗಿಬಿಟ್ಟಿದ್ದಾರೋ? ತೀರ ಮೊದಲು ಹಾಗೆ ಮಾಡುತ್ತಿದ್ದುದುಂಟು; ಈಚೆಗೆ ಇಲ್ಲವಲ್ಲ? ದಾರಿಯಲ್ಲಿ ಯಾರಾದರೂ ಸ್ನೇಹಿತರು ಸಿಕ್ಕಿ, ಅವರೊಂದಿಗೆ ಎಲ್ಲಾದರೂ ಹೋಗಿದ್ದಾರೋ? ಯಾಕೆ ಬರಲಿಲ್ಲ?

ಹಾಲು ಉಕ್ಕಿ ಸುರಿದ ವಾಸನೆ ಸುತ್ತಿಕೊಂಡಿತು. ಮೋಹಿನಿ ಅಡಿಗೆ ಮನೆಗೆ ಹೋಗಿ ಸೀರೆಯ ತುದಿಯಿಂದ ಕಾದ ಹಾಲಿನ ಪಾತ್ರೆಯನ್ನು ಹಿಡಿದೆತ್ತಿ ಕೆಳಕ್ಕಿಳಿಸಿದಳು. ಕರಿದಿಟ್ಟ ತಣ್ಣಗಾಗಿದ್ದ ಬೋಂಡ, ಆರಿಹೋಗಿದ್ದ ಕಾಫಿಯ ಡಿಕಾಕ್ಷನ್ – ಮೋಹಿನಿಯನ್ನು ಅಣಕಿಸತೊಡಗಿದುವು. ಅವ್ಯಕ್ತವಾಗಿ ಅಡಗಿದ್ದ ಅವಳ ನಿರಾಶೆಯ ಭಾವನೆಯನ್ನು ಅವು ಕೆರಳಿಸಿದುವು; ನಿರಾಶೆಯಿಂದ ಅಸಮಾಧಾನವಾಯಿತು; ಅಸಮಾಧಾನ ಕೋಪಕ್ಕೆ ಆಹ್ವಾನ ಕೊಟ್ಟಿತು; ಕೋಪ, ಮೊದಲೇ ಹಸಿದು ಚುರುಚುರುಗುಟ್ಟುತ್ತಿದ್ದ ಹೊಟ್ಟೆಗೆ ಕಿಚ್ಚಿಕ್ಕಿತು. 'ಆಗಲಿ, ಇವರಿಗೆ ಇದೇ ಶಿಕ್ಷೆ' ಎಂದು ಎರಡು ಬೋಂಡಗಳನ್ನು ಬಾಯಿಗೆ ಹಾಕಿಕೊಂಡಳು. ಡಿಕಾಕ್ಷನ್ನನ್ನು ಬಿಸಿ ಮಾಡಿಕೊಂಡು ಬಿಸಿ ಹಾಲನ್ನು ಬೆರಸಿಕೊಂಡು, ತನ್ನ ಪಾಲಿನ ಕಾಫಿಯನ್ನು ಕುಡಿದೇ ಬಿಟ್ಟಳು! ಮತ್ತೇನು ಮಾಡುವುದು? ತನ್ನನ್ನು ನಿರಾಶೆಗೊಳಿಸಿದ ಅವರಿಗೆ ಇದೇ ಶಿಕ್ಷೆ!

ಮಲಗುವ ಕೋಣೆಗೆ ಬಂದಳು ಮೋಹಿನಿ. ದೀಪದ ಸ್ವಿಚ್ ಹಾಕಿ, ಸುತ್ತಿರಿಸಿದ್ದ ತನ್ನ ಹಾಸಿಗೆಗೆ ಒರಗಿ ಮಲಗಿದಳು.

—ಸಂಸಾರ ಹೂಡಿದ ಹೊಸತರಲ್ಲಿ ತಾವು ಹೋದಾಗಲೆಲ್ಲ ನನ್ನನ್ನು ಸಿನಿಮಾಕ್ಕೆ ಕರೆದುಕೊಂಡು ಹೋಗುತ್ತಿರಲಿಲ್ಲವಲ್ಲ? ಅವರು ಹತ್ತು ಸಿನಿಮಾಕ್ಕೆ ಹೋದ ಕಡೆ ನನ್ನನ್ನು ಒಂದಕ್ಕೋ ಎರಡಕ್ಕೋ ಕರೆದುಕೊಂಡು ಹೋಗುತ್ತಿದ್ದರು. ವಾಕಿಂಗ್ ಎನ್ನುವುದು ಇರಲೇ ಇಲ್ಲ. ಮನೆಗೆ ಹೊತ್ತಾಗಿಯೇ ಬರುತ್ತಿದ್ದರು. ಯಾಕೆ ಹೊತ್ತಾಗಿ ಬರುತ್ತೀರಿ ಎಂದು ನಾನೂ ಆಕ್ಷೇಪಿಸುತ್ತಿರಲಿಲ್ಲ. ಎಂದಾದರೂ ಒಂದು ದಿನ ಕೇಳಿದಾಗ, ಸ್ನೇಹಿತರ ಜೊತೆ ಹರಟೆ ಹೊಡೆಯುತ್ತ ಕುಳಿತುಬಿಟ್ಟಿದ್ದೆ ಎಂದುಬಿಡುತ್ತಿದ್ದರು....ಇವೊತ್ತು ಸಿನಿಮಾಕ್ಕೆ ಹೋಗುವುದು ಅಂತ ಐದು ಗಂಟೆಯ ಹೊತ್ತಿಗೇ ಅನ್ನ ಸಾರು ಮಾಡಿಟ್ಟಿದ್ದಾಯಿತು. ಎಲ್ಲ ಆರಿ ಅಕ್ಷತೆಯಾಗಿರುತ್ತೆ....ನಾಲ್ಕು ಸಂಡಿಗೆಯಾದರೂ ಕರಿದಿಡಲೆ, ಬಿಸಿ

ಬಿಸಿಯಾಗಿ, ಅವರು ಬರುವ ಹೊತ್ತಿಗೆ?....ಇಲ್ಲ, ಇಲ್ಲ; ಇವೊತ್ತು ನನ್ನನ್ನ ಸಿನಿಮಾಕ್ಕೆ ಕರೆದುಕೊಂಡು ಹೋಗದೇ ಇದ್ದದ್ದಕ್ಕೆ ಅವರಿಗೆ ತಂಗಳು ಬೋಂಡ ಶಿಕ್ಷೆ! ಹ್ಹ ಹ್ಹ ಹ್ಹ! ಅವರದನ್ನ ಬಾಯಿಗೆ ಹಾಕಿಕೊಂಡಾಗ, ತಣ್ಣನೆ ಕಪ್ಪೆ ತಿಂದ ಹಾಗೆ ಅಂತ ಹಾಸ್ಯ ಮಾಡುತೀನಿ, ಇರಲಿ....ಅಥವಾ ಹರಟೆ....ಸಂಬಳ ಬಂದೇ ಇಲ್ಲ ಅಂತ ಕಾಣುತ್ತೆ....ಈಚೆಗೆ ಅವರು ನನ್ನ ಕೂಡ ಸುಳ್ಳು ಹೇಳುತಾ ಇಲ್ಲವಲ್ಲ? ಸಂಬಳ ಬರದೆ ಹೋದರೆ ನೇರವಾಗಿ ಮನೆಗೆ ಬಂದುಬಿಡಬಾರದೆ? ಸುಭದ್ರಮ್ಮನವರು ಹೇಳಿದ್ದು ನಿಜ ಅಂತ ಕಾಣುತ್ತೆ....ಗಂಡಸರೆಲ್ಲಾ ಒಂದೇ....

—ಛೆ, ಛೆ! ಎಂದಿಗೂ ಇಲ್ಲ....

—ನನ್ನ ಯಜಮಾನರು ಹಾಗಲ್ಲ....

—ಮಾಡಿದ ತಪ್ಪನ್ನೆಲ್ಲಾ ಒಪ್ಪಿಕೊಂಡುಬಿಟ್ಟಿದಾರೆ....

× × × ×

"ಮೋಹಿನಿ, ನಿನ್ನನ್ನು ಮದುವೆಯಾದ್ದು ನಿನ್ನ ರೂಪಿಗೋಸ್ಕರ, ನಿನ್ನ ರೂಪು ಕಣ್ಣು ಮೂಗು ಕೆನ್ನೆ ಕಿವಿ (....ಥೂ, ನಾಚಿಕೆ ಇಲ್ಲದೆ ಏನೇನೋ ಹೇಳಿದರು....) ....ನನ್ನ ಕನ್ನಡ ಪಂಡಿತರು ಇನ್ನೂ ಏನೋ ಹೇಳುತಾ ಇದ್ದರು, ಲಾವಣ್ಯ ಅಂತ. ರೂಪಿದ್ದರೂ ಲಾವಣ್ಯ ಇಲ್ಲದೆ ಇರಬಹುದು. ನಿನ್ನಲ್ಲಿ ರೂಪ ಲಾವಣ್ಯ ಎರಡೂ ಇದೆ....ನಿನ್ನಷ್ಟು ಯಾರೂ ನನ್ನನ್ನ...."

"ನನ್ನಷ್ಟು ಯಾರೂ? ಇದೇನೂ ಅಂದ್ರೆ? ಹಾಗಾದರೆ ಯಾರ ಯಾರ ಸಂಗ ಬೆಳಸಿದ್ದಿರಿ ಅಂದ್ರೆ?"

"ಯಾರ ಸಂಗಾನೂ ಬೆಳಸಿರಲಿಲ್ಲ. ನೀನೇ ನನ್ನ ಮೊದಲ ಕಡೆಯ ವರೆಗಿನ, ಜೀವನ ಸಂಗಾತಿ."

"'ನಿನ್ನಷ್ಟು ಯಾರೂ ನನ್ನನ್ನ'....ಇದಕ್ಕೆ ನಿಮ್ಮ ಕನ್ನಡ ಪಂಡಿತರು ಅದೇನು ವ್ಯಾಖ್ಯಾನ ಮಾಡುತಾ ಇದ್ದರೋ?"

"ನಿನ್ನ ವ್ಯಾಖ್ಯಾನ ಏನು?"

"ಏನೇ? ನನ್ನ ಕೈಹಿಡಿಯೋಕೆ ಮುಂಚೆ ನೆರೆಮನೆ ಹುಡುಗಿಯದೋ ಕಾಲೇಜು ಕನ್ಯೆಯದೋ ಕೈಯನ್ನ ಹಿಡಿದಿದ್ದಿರಿ ಅಂತ."

"ನೋಡು, ನಿನ್ನಲ್ಲಿ ಮುಚ್ಚುಮರೆಯೇನು? ಕಾಲೇಜಿನ ಕನ್ಯೆಯೊಬ್ಬ ಳೊಂದಿಗೆ ಮಾತಾಡುವಷ್ಟು ಸ್ನೇಹ ಬೆಳಸಿದ್ದುಂಟು. ನಾನು ಅಂದು ಇಂದು

ಆಡಿದ ಆ ಮಾತು ಈ ಮಾತುಗಳ ಪೈಕಿ ಪ್ರೀತಿ ಅನ್ನೋ ಮಾತಿನ ಮುತ್ತೂ ಒಂದಿತ್ತು........

" ಎಲ್ಲಾ ಥೋಂಗಿ ! ಮುತ್ತಿನ ಮಾತೇ ಇರಲಿಲ್ಲವೋ ?"

" ಇಲ್ಲ, ಆ ವಿಚಾರದಲ್ಲಿ ಮಾತು ಏನೂ ಇರಲಿಲ್ಲ."

" ಮಾತಿರಲಿಲ್ಲ....ಆದರೆ........"

" ನೋಡು, ಸುಳ್ಳು ಯಾಕೆ ಹೇಳಲಿ ? ಅದೆಲ್ಲಾ ಬೇರೆ ಇನ್ನೊಬ್ಬರಿಗೆ ಅರ್ಪಿತವಾಗಿತ್ತು."

" ಆ್ಞ ! ಏನೂ ಅಂದ್ರೆ ಇದು ! ಎಲ್ಲಾ ನನಗೇ ಮೀಸಲು ಅಂತ ಹೇಳಿದಿರಿ ?"

" ಮದುವೆಯಾದ ಮೇಲೆ ಎಲ್ಲಾ ನಿನಗೇ ಮೀಸಲು. ದೇವರಿಗೆ ಅಂತ ಮಾಡಿದ ಮೀಸಲು ನೈವೇದ್ಯಾನ ಮಕ್ಕಳು ಸ್ವಲ್ಪ ಎಗರಿಸಿಕೊಂಡು ತಿಂದರೆ, ಐದು ವರ್ಷದೊಳಗಿನ ಮಕ್ಕಳು ದೇವರ ಸಮಾನ, ಅದಕ್ಕೆ ಕಟ್ಟಿಲ್ಲ ಅನ್ನುವು ದಿಲ್ಲವೆ ಹಾಗೆ....ಮದುವೆಗೆ ಮುಂಚೆ....ಸ್ವಲ್ಪ ರುಚಿ ನೋಡಿದೆ....ಆ ಪದದ ಸವಿಯನ್ನು....ಅಷ್ಟೆ. ಅದೂ ಯಾರ ಬಳಿ ? ಹೆಚ್ಚು ಕಡಮೆ ನನಗೆ ಅಂತಲೇ ಮೀಸಲಾಗಿದ್ದ ನನ್ನ ಸೋದರ ಮಾವನ ಮಗಳು. ಅದರಲ್ಲೇನು ದೋಷ ? ಜೊತೆಯಲ್ಲೇ ಬೆಳೆದ ಹುಡುಗಿ....ನಿನ್ನಷ್ಟು ಚೆನ್ನಲ್ಲ ಅಂತ ಇಟ್ಕೊಕೋ....ಇಲ್ಲದೆ ಇರೋದು, ಮಡದಿ ಅಂತ ಮುದ್ದು ಹೆಚ್ಚೋದಿಲ್ಲ ; ಸಂಬಂಧ ಅಂತ ಸೌಂದರ್ಯ ಹೆಚ್ಚೋದಿಲ್ಲ....ರುಚಿಯೇನೋ ನೋಡಿದೆ, ದಿಟ. ಪ್ರಯೋ ಜನವೇನು ? ಕದ್ದುತಿಂದ ನೈವೇದ್ಯದಲ್ಲಿ ಕಲ್ಲು ಸಿಕ್ಕಿ ಉಗುಳೋ ಹಾಗಾಯಿತು. ನನ್ನ ರೊಮಾನ್ಸ್ ಎಲ್ಲ ಇಷ್ಟಕ್ಕೆ ಆಖೈರು. ಆಮೇಲೆ ನೀನು – ಮೋಹಿನಿ, ನನ್ನ ಮನಮೋಹಿನಿ, ಹೃದಯ ಮೋಹಿನಿ...."

× × × ×

" ಸಾಕೂ ಅಂದ್ರೆ ನಿಮ್ಮ ಸ್ತುತಿಪಾಠ. ನಿತ್ಯ ಇಷ್ಟರಲ್ಲಿ ತೃಪ್ತಿಪಡಿಸುತಾ ಇದ್ದೀರ. ನಿಮ್ಮಾಣೆಗೂ ಹೇಳಿ, ಇವೊತ್ತು ಸಿನಿಮಾಕ್ಕೆ ಹೋಗಿದ್ದಿರೋ ಇಲ್ಲವೋ ?"

" ನೀನು ಆಣೆ ಇಡು ಅಂತೀಯ. ಅಲ್ಲೇ ಇಟ್ಟು ಬಂದೆ – ಒಂಬತ್ತಾಣೆ ಪ್ಲಸ್ ಒಂದೂ ಕಾಲಾಣೆ ಪ್ಲಸ್ ಅರ್ಧಾಣೆ ಈಕ್ವಲ್ಸ್ ಹತ್ತೂ ಮುಕ್ಕಾಲಾಣೆ."

" ಟಿಕೇಟು ಪ್ಲಸ್...."

" ಉಳಿದದ್ದೆಲ್ಲಾ ಊಹೆಗೆ ಬಿಡೋದೆ ಕ್ಷೇಮ, ಸಿನಿಮಾದಲ್ಲಿ ನಡೆಯೋ ಹಾಗೆ."

" ಏನು, ಅಲ್ಲಿ ನಡೆಯೋದು ?"

" ಇದು...."

..................

" ಥೂ, ಹೋಗೀಂದ್ರೆ...."

" ....ತಿಳೀತೆ "

" ತಿಳೀತು....ಇವೊತ್ತು....ಹಾಳು ದುರ್ನಾತ...."

" ಎಲಾ, ಕಡೆಗೂ ಅರ್ಧಾಣೆ ಒಂದೂ ಕಾಲಾಣೆಯನ್ನ ಕಾಪಾಡ ಲಿಲ್ಲವಲ್ಲ....ಸಾಬರ ಗಡ್ಡಕ್ಕೆ ಸೀಗೇಕಾಯಿ ಬೇರೆ ಅಂದ ಹಾಗೆ....ಇನ್ನು ಮೇಲೆ ಬೇಡಾ ವಜಾ."

" ಬೀಡೀನೂ ವಜಾ ಮಾಡಿಬಿಡಿ ಮತ್ತೆ."

" ಬೀಡಿ ಅಲ್ಲವೇ. ಅವಮಾನ ಮಾಡಬೇಡ. ಸಿಗರೇಟು.... Gold Flake...."

" ಯಾವುದೋ ಒಂದು, ಸುಡೋ ಹೆಸರು."

" ಸುಡೋದೇ ತಾನೆ....ಅಪರೂಪಕ್ಕೆ....ಸಿನಿಮಾಕ್ಕೆ ಒಂಟಿಯಾಗಿ ಹೋದಾಗ ಮಾತ್ರ...."

" ಅಪರೂಪಕ್ಕೆ ತಾನೆ....ಹಾಗಾದರೆ ಬಿಟ್ಟೇ ಬಿಡಿ...."

" ಸ್ವಲ್ಪ ಕಷ್ಟ...."

" ಹಾಗಾದರೆ ನಿಮಗೂ ಸ್ವಲ್ಪ ನಷ್ಟ."

" ಏನೂ....?"

" ಅದು...."

" ಅದಲ್ಲ....ಇದು...."

.....................

" ....ಯಾಕೆ, ಥೂ ಅನ್ನಲಿಲ್ಲ."

—ಅಂತೂ ಒಂದಕ್ಕೆ ಎರಡು ಗಿಟ್ಟಿಸಿದರು, ಅವೊತ್ತು. ಗಂಡಸರಿಗೆ ನಾಚಿಕೆಯೇನೋ ಇಲ್ಲ....ಆದರೆ, ಅವರು....

× × × ×

—ಸುಭದ್ರಮ್ಮನೋರು ಹೇಳಿದ ಹಾಗೆ........ನಡಸ್ತಾನೇ ಇದೀನಿ - ಸ್ವಲ್ಪ ಅಂಕೆ, ಸ್ವಲ್ಪ ತನಿಖೆ, ಮುನಿಸು, ನಟನೆ........ಅಂತೂ ಈಗ ದಾರಿಗೆ ಬಂದುಬಿಟ್ಟಿದಾರಲ್ಲ....ಸಿಗರೇಟಿನ ವಾಸನೆ ಇಲ್ಲ. ಹೊತ್ತಿಗೆ ಮುಂಚೆ ಮನೆಗೆ ಬರ್‍ತಾರೆ. ನನ್ನನ್ನ ಬಿಟ್ಟು ಸಿನಿಮಾಕ್ಕೆ ಹೋಗೋದಿಲ್ಲ. ಇವತ್ತು ಅವರು ಬಂದ ಕೂಡಲೆ ಗೊತ್ತಾಗುತ್ತೆ....ಎಲ್ಲಿಗೆ ಹೋಗಿದ್ದರೂ ಅಂತ.

× × × ×

—ಓ, ಮುಂದುಗಡೆ ಕೋಣೇದು ಬೋಲ್ಟೇ ಹಾಕಿಲ್ಲ ಅಂತ ಕಾಣುತ್ತೆ....

ಹಾಳಾದ್ದು, ಶನಿ, ಈ ಬೋಲ್ಟು ಎಷ್ಟು ಬಿಗಿಯಪ್ಪ....

ಸದ್ಯ, ಕಡೆಗೂ ಆಯ್ತಲ್ಲ....

ಇದು, ಯಾವುದು? ಪೇಪರಿನಲ್ಲಿ ಸುತ್ತಿಟ್ಟದಾರೆ, ಹೊಸ ಪುಸ್ತಕದ ಹಾಗೆ ಕಾಣುತ್ತೆ?....ಫಾಟೆಗಳು, ನನಗೆ ತೋರಿಸೇ ಇಲ್ಲ........

ಥೂ, ಇದೇನು ಹಾಳು ಅಧ್ವಾನದ ಚಿತ್ರ, ಕಾಣೋ ಹಾಗೆ, ಪುಸ್ತಕದ ಮೇಲೆ....

ಓ, ಗುರುತು ಬೇರೆ ಇಟ್ಟದಾರೆ....ಅರ್ಧ ಮುಕ್ಕಾಲೆಲ್ಲಾ ಓದಿದಾರೆ, ಆಗಲಿ....ಈಗ ಏಳು ಏಳೂವರೆ ಇರಬಹುದು....ಅವರು ಬರೋವರೆಗೆ ಓದುತ್ತಾ ಇರೋಣ....ಹೋಗಲಿ ಪಾಪ, ಸಂಡಿಗೆ ಕರಿದುಬಿಡಲೋ....ಸ್ವಲ್ಪ ಓದಿ ಆಮೇಲೆ ಕರಿದರಾಯ್ತು....

× × × ×

"ಠಣ್ ಠಣ್ ಠಣ್...."

—ಓ, ಒಂಬತ್ತು ಗಂಟೆ ಹೊಡೀತ ಇದೆ ಅಂತ ಕಾಣುತ್ತೆ ಪಕ್ಕದ ಮನೆ ಗಡಿಯಾರದಲ್ಲಿ....

ಸಿನಿಮಾಕ್ಕೆ ಹೋಗಿದ್ದರೆ ಇಷ್ಟು ಹೊತ್ತಿಗೆ ಬರಬೇಕಾಗಿತ್ತಲ್ಲ?.... ಸುಭದ್ರಮ್ಮನವರಿಗೆ ಹೇಳಿ ಲೀಲಾನ್ನಾದರೂ ಕೂರಿಸಿಕೊಳ್ಳಲೆ? ಒಬ್ಬಳ

ಬದಲು ಇಬ್ಬರು ಹೆಂಗಸರು, ಅಷ್ಟೆ....ಇಷ್ಟಕ್ಕೂ ಭಯವೇನು, ಬೋಲ್ಟು ಹಾಕಿಕೊಂಡಿದೀನಿ....

ಓದಿ ಮುಗಿಸಿಬಿಡೋಣ....ನಾಗಾಲೋಟದಲ್ಲಿ ಓಡುತ್ತೆ ಕಥೆ.... ಮುಂದಕ್ಕೆ ಓದೋಣ ಅನ್ಸುತ್ತೆ....ಆದರೆ, ಅದು ಯಾಕೋ ಓದುತಾ ಇದ್ದರೆ.... ಏನೋ ಒಂದು ತರಹ ಅನ್ನಿಸುತ್ತೆ....ಹೇಗಾದರೂ ಇರಲಿ, ಓದಿ ಮುಗಿಸಿ ಬಿಡೋಣ....

—ಹತ್ತು ಹೊಡೀತೋ ಏನೋ, ಕೇಳಿಸಲೆ ಇಲ್ಲ....

" ಟಿಕ್ - ಟಿಕ್, ಟಿಕ್ - ಟಿಕ್, ಟಿಕ್ - ಟಾಕ್....

—ಅಲ್ಲ, ಟಿಕ್-ಟಿಕ್ ಶಬ್ದ ಕೂಡಾ ಕೇಳುತಾ ಇದೆ, ಗಂಟೆ ಹೊಡೆದದ್ದು ಕೇಳಬೇಡವೆ? ಅಥವಾ ಇನ್ನೂ ಹತ್ತು ಇಲ್ಲವೋ ?....

" ಠಣ್...."

" ಒಂಬತ್ತೂವರೆಯೋ ? ಇರಲಾರದು. ಹತ್ತೂವರೆ ಇರಬೇಕು. ಮುಕ್ಕಾಲೆಲ್ಲಾ ಮುಗೀತಾ ಬಂದಿದೆ ಪುಸ್ತಕ. ಅಲ್ಲ, ಹತ್ತೂವರೆಯಾದರೂ ಬರಬೇಡವೆ, ಮನೆಗೆ? ಇಷ್ಟು ಹೊತ್ತಿನ ತನಕ ಅದು ಯಾವ ಸಿನಿಮಾ ? ಅಥವಾ ಮೊದಲನೆ ಆಟ ಮುಗಿಸಿಕೊಂಡು ಇನ್ನೊಂದು ಸಿನಿಮಾಕ್ಕೆ ಎರಡನೆ ಆಟಕ್ಕೆ ಹೋಗಿದ್ದಾರೊ! ಸುಭದ್ರಮ್ಮನೋರು ಹೇಳುವ ಹಾಗೆ, ಈ ಗಂಡಸರನ್ನ ನಂಬೋದು ಕಷ್ಟ ಅಂತ ಕಾಣುತ್ತೆ....ಅಷ್ಟಲ್ಲದೆ ಇಂಥ ಕಥೆ ಬರೀತಾರೆಯೇ....ಆದರೂ, ಈ ಕಥೇಲಿ ಗಂಡಸರಿಗಿಂತ ಹೆಂಗಸರೇ ಮಾನ ಮರ್ಯಾದೆ ಬಿಟ್ಟೋರು ಅಂತ ಕಾಣುತ್ತೆ....ನಲವತ್ತೈದರ ಮೇಡಂ ಜಯ ಲಕ್ಷಮ್ಮ....ಥೂ, ಥೂ, ನೆನಸಿಕೊಂಡರೂ ಅಸಹ್ಯವಾಗುತ್ತೆ....ಅಧ್ವಾನದ ಕಥೆ ....ಇಂಥಾದ್ದನ್ನೆಲ್ಲ ಯಾಕೆ ಬರೀತಾರೆಯೋ....ಚಿಕ್ಕ ಪುಟ್ಟ ಹುಡುಗರು ಹುಡುಗಿಯರು ಓದಿದರೆ ಕೆಟ್ಟು ಹಾಳಾಗೋದರಲ್ಲಿ ಸಂಶಯ ಇಲ್ಲ....ಒಳಗಿರುವ ಸ್ವಾರಸ್ಯವನ್ನ ಬಿಚ್ಚಿ ತೋರಿಸುವ ಹಾಗೆ ಮುಚ್ಚುಮರೆ ಇಲ್ಲದ ಹೊಲಸು ಚಿತ್ರ....ಯಾರದ್ದಿರಬಹುದು ? ಜಯಲಕ್ಷಮ್ಮನದೋ ನಾಗರತ್ನಮ್ಮನದೋ.... ನಾಗರತ್ನನದು ಅಂತಲೇ ಉದ್ದೇಶ ಪಟ್ಟಿದಾರೆ ಅಂತ ಕಾಣುತ್ತೆ........ಹೇಳಿ ಕೇಳಿ ವೇಶ್ಯೆ....ಆದರೂ, ಹೀಗೆ....ಥೂ ಅಸಹ್ಯವಾಗುತ್ತೆ....ಹುಡುಗರೇನು, ಇದನ್ನ ಓದಿದರೆ ದೊಡ್ಡವರ ಮನಸ್ಸೂ ಕದಲುವುದು ಖಂಡಿತ....ಅದಕ್ಕೇ

ಇರಬೇಕು, ತಂದ ಪುಸ್ತಕವನ್ನೆಲ್ಲ ಮೊದಲು ನನ್ನ ಕೈಗೆ ಓದು ಅಂತ ಕೊಡುತ್ತಾ ಇದ್ದವರು ಇದನ್ನ ಮಾತ್ರ ಕಾಣಬಾರದು ಅಂತ ಪೇಪರಿನಲ್ಲಿ ಸುತ್ತಿ ಇಟ್ಟಿದಾರೆ....ಮರೆತು ಮೇಲೇ ಇಟ್ಟುಬಿಟ್ಟಿದಾರೆ, ಡ್ರಾಯರಿನಲ್ಲೂ ಇಡದೆ.... ಅದಕ್ಕೇ ನಿನ್ನೆ ರಾತ್ರಿ ಅಷ್ಟು ಹೊತ್ತಿನವರೆಗೂ ನಿದ್ದೆ ಕೆಟ್ಟು ಓದುತ್ತಾ ಇದ್ದದ್ದು.... ಯಾವುದೋ ಪುಸ್ತಕ ಅಂತಿದ್ದೆ....ಇದೇ ಇರಬೇಕು....ಹಾಳಾದ್ದು ನನ್ನ ನಿದ್ರೇನೂ ಕೆಡಿಸಿದರು....ಕೋತಿ ತಾನು ಕೆಟ್ಟದ್ದಲ್ಲದೆ ವನಾನೂ ಕೆಡಿಸಿತು ಅಂದ ಹಾಗೆ....ಪಾಪ, ಅವರೇನು ಮಾಡುತಾರೆ, ಪುಸ್ತಕದ ಅಮಲು ಹಾಗಿದೆ........ರೋಗಿಯ ಕೈಗೆ ಅಪಥ್ಯದ ತಿಂಡಿ ಸಿಕ್ಕಿದ ಹಾಗೆ........ಅವರೂ ಮನುಷ್ಯರೆ....ಈವಾಗ ನಾನೇ ಓದಿ ಮುಗಿಸಿಬಿಡಬೇಕು ಅಂತ ಕುಳಿತಿಲ್ಲವೆ? ದೇವರ ದಯದಿಂದ ದುಡ್ಡುಕೊಟ್ಟು ಕೊಂಡಿಲ್ಲವಲ್ಲ ಈ ಅಧ್ವಾನದ ಪುಸ್ತಕ ವನ್ನ....ಯಾರೋ ಅನಂತರಾಯ ಅಂತ ಹೆಸರಿದೆ....ತಾನು ಓದಿ ಮೆಚ್ಚಿ ಬಣ್ಣಿಸಿ ಇವರ ಕೈಗೆ ಕೊಟ್ಟಿರಬೇಕು....ಎಂಥ ಸ್ನೇಹಿತನೋ ಏನೋ ಹಾಳಾದೋನು....ಇವೊತ್ತು ಪುಸ್ತಕದ ರುಚಿ ತೋರಿಸುತಾನೆ, ನಾಳೆ....ಛೆ ಛೆ....ಅವರು ಅಂಥೋರಲ್ಲ....ಇರಲಿ ಇರಲಿ....ಓದಿ ಮುಗಿಸಿಯೇಬಿಡೋಣ.... ನಾಳೆ ಅವರಿಗೆ ಈ ಕಥೆಯನ್ನ ಪಾಠ ಒಪ್ಪಿಸಿದರೆ....ಅವರ ಬಾಯಿಂದ ಏನು ಹೊರಡುತ್ತೆ ನೋಡೋಣ....ಆಮೇಲೆ ಮುಂದಿನ ಎಚ್ಚರಿಕೆ ಕ್ರಮ....ಇಷ್ಟೇ ಓದಿಯಾಯ್ತು. ಇನ್ನು ಸ್ವಲ್ಪದರಲ್ಲಿ ಏನು ಮಹಾ....ಓದಿ ಮುಗಿಸೇ ಬಿಡೋಣ....

× × × ×

"ಠಣ್, ಠಣ್, ಠಣ್...."

—ಸರಿಯಾಗಿ ಹನ್ನೊಂದು ಗಂಟೆ....ಎರಡನೇ ಆಟ ಅಂದರೆ, ಹನ್ನೆರ ಡಾದರೂ ಆಗಬಹುದು....ಸುಭದ್ರಮ್ಮನವರನ್ನು ಕೂಗಿ ಎಬ್ಬಿಸಲೇ?.... ಅವೇಳೆ ಹೊತ್ತಿನಲ್ಲಿ ದೀಪಾ ಉರೀತಾ ಇರೋದು ಕಂಡರೂ ಅವರೇ ಓದುತಾ ಇದಾರೆ ಅಂತ ತಿಳಿದುಕೊಳ್ಳುತ್ತಾರೆ ಯಾರಾದರೂ, ಭಯವೇನೂ ಇಲ್ಲಾ. ಇಷ್ಟಕ್ಕೂ ಭದ್ರವಾಗಿ ಬೋಲ್ಟು ಹಾಕಿಕೊಂಡಿದೀನಲ್ಲ. ಅಷ್ಟೂ ಮೀರಿ ಕಳ್ಳನೋ ಗಿಳ್ಳನೋ ಬಂದರೆ ವೆಂಕಟರಾಯರೇ ಅಂತ ಕಿರಿಚಿಕೊಂಡು ಬಿಡುತೀನಿ...."

" ಠವಾರ್, ಠಪ್ ಠಪ್...."

—ಏನು ಸದ್ದು ?....ಕಳ್ಳ ?....ಕಿರಿಚಿಕೊಳ್ಳೋಣ ಅಂದರೆ ನಾಲಗೆಯೇ ಬರೋದಿಲ್ಲವಲ್ಲ....

ಹಾಳು ಶನಿ ಮುಂಡೇದು ಬೆಕ್ಕು....ಇನ್ನೂ ಮೈಕೈಯೆಲ್ಲ ಥರಥರ ನಡಗುತಾ ಇದೆ....ಅಡಿಗೆ ಮನೆಯ ಕಿಟಕಿ ಬಾಗಿಲನ್ನು ಹಾಕಿಕೊಂಡು. ಹಾಗೇ ಬಾಗಿಲನ್ನೂ ಮುಂದಕ್ಕೆ ಎಳೆದುಕೊಂಡು ಬರೋಣ....

ಬೆಕ್ಕಿನ ಹಾಗೆ ಅಂತ ಕಾಣುತ್ತೆ ಗಂಡಸರೆಲ್ಲ, ಕಣ್ಣು ಮುಚ್ಚಿ ಹಾಲು ಕುಡಿಯೋದು. ಅಳಿಯನ ಕುರುಡು ಬೆಳಗಾದರೆ ಕಾಣುತ್ತೆ. ಅವರು ಬರಲಿ ಇವೊತ್ತು, ಮಾಡ್ತೀನಿ: ಇಲ್ಲಾ ಕಣೇ ಮಹಾರಾಯಿತಿ, ಇನ್ನು ಮೇಲೆ ಹೀಗೆ ಮಾಡುವುದಿಲ್ಲ ಅಂತ ತಪ್ಪು ಒಪ್ಪಿಕೊಳ್ಳುವವರೆಗೂ ಬಿಡುವುದಿಲ್ಲ....

ಹಾಳಾದ್ದು ಕೂತೂ ಕೂತೂ ಬೆನ್ನೆಲ್ಲಾ ನೋವು....ನನ್ನ ಹಾಸಿಗೆಯನ್ನ ಅವರ ರೂಮಿನಲ್ಲೆ ಉರುಳಿಸಿಕೊಂಡು, ಹಾಗೇ ಮಲಗಿಕೊಂಡು ಆ ಹಾಳು ಕಥೆಯನ್ನ ಓದಿ ಮುಗಿಸಿಬಿಡೋಣ.

× × × ×

—ಏನು, ಯಾರೋ ಬಾಗಿಲು ತಟ್ಟಿದ ಹಾಗಾಯಿತೆ ?....ಗಾಳಿ ಅಂತ ಕಾಣುತ್ತೆ....ಅವರೇ ಆಗಿದ್ದರೆ ಕೂಗಿ ತಟ್ಟುತಾ ಇದ್ದರು....ಇನ್ನೇನು, ಹತ್ತು ಪುಟ....ಮುಗೀತಾ ಬಂತಲ್ಲ ಸದ್ಯ....

× × × ×

—ಕಡೆಗೂ ಮುಗೀತು....ಮೇಜಿನ ಮೇಲೆ ಹೀಗೇ ಬಿದ್ದಿರಲಿ, ಚಿತ್ರ ಮೇಲಾಗಿ....ನಾನೂ ನೋಡಿದೇನೆ, ಬಹುಶಃ ಓದಿಯೂ ಇದೇನೆ, ಅಂತ ಗೊತ್ತಾಗಲಿ....ನೀವೇ ಓದಬಹುದು, ನಾನು ಯಾಕೆ ಓದಬಾರದು ಅನ್ನುವ ಪ್ರಶ್ನೆಯನ್ನ ಆ ಪುಸ್ತಕವೇ ಕೇಳಲಿ, ಅವರನ್ನ.

ಈ ಪುಸ್ತಕ ಓದಿ, ಹೊತ್ತೇನೋ ಕಳೆಯಿತು. ಇಲ್ಲದೆ ಇದ್ದರೆ, ತುಂಬ ಹೆದರಿಕೆಯಾಗುತಾ ಇತ್ತು ಅಂತ ಕಾಣುತ್ತೆ, ನಿದ್ರೇನೂ ಬರದೆ. ಹೊತ್ತೇನೋ ಕಳೆಯಬಹುದು ಪುರುಷಾರ್ಥ ಏನು ? ಥೂ, ಹೀಗೂ ಉಂಟೆ, ಅಂತ ಜುಗುಪ್ಸೆಯೇನೋ ಆಗುತ್ತೆ. ನಾಗರತ್ನನೇನೋ ಹುಟ್ಟಾ ಸೂಳೆ. ಜಯಲಕ್ಷಮ್ಮ ನಂಥವರು ಎಷ್ಟು ಜನ ಇದ್ದಾರು ನಮ್ಮಲ್ಲಿ, ಕೈಹಿಡಿದ ಗಂಡನಿಗೇ ಮೋಸ

ಮಾಡುವವರು ? ಅಥವಾ, ರೂಪವತಿಯಾದ ಚಿಕ್ಕ ಹಂಡತಿಯನ್ನು ವಂಚಿಸಿ, ಜಯಲಕ್ಷ್ಮಮ್ಮನ ಸೆಳೆತಕ್ಕೆ ಸಿಕ್ಕಿದ ಸೋಮಸುಂದರನಂಥವರು ತಾನೆ ಎಷ್ಟು ಮಂದಿ ಇದ್ದಾರು ? ಇಂಥವರನ್ನೆಲ್ಲಾ ಉದ್ಧಾರ ಮಾಡುತೀನಿ ಅಂತ ಹೊರಟ ಕಾಲೇಜು ವಿದ್ಯಾರ್ಥಿ ವಿಶ್ವನಾಥ ಏನೇನೋ ಖಾಯಿಲೆ ತಂದುಕೊಂಡು, ಕಡೆಗೆ ಹುಚ್ಚರಾಸ್ಪತ್ರೆ ಸೇರಿದನಲ್ಲ? ಅಂತೂ ಯಾರ ನಡತೇನೂ ಮೆಚ್ಚುವ ಹಾಗಿಲ್ಲ....ಇಂಥ ವ್ಯಾಪಾರಕ್ಕೆ ಇಳಿಯುವವರ ಗತಿ ಹೀಗೆ ಅನ್ನೋ ನೀತಿ ಯಾದರೂ ಹೊಳೆಯುವ ಹಾಗೆ ಬರೆದಿದೆಯೇ ? ಅದೂ ಇಲ್ಲ. ಪುಸ್ತಕಾ ನೆಲ್ಲಾ ಹಿಂಡಿದರೂ ತೊಟ್ಟು ನೀತಿಯೂ ತೊಟ್ಟಿಕ್ಕುವುದಿಲ್ಲ. ಮಾನಾ ಮರ್ಯಾದೆ ಇಲ್ಲದ ಮಾತುಕತೆ, ನಾಚಿಕೆ ಬಿಟ್ಟ ನಡತೆ, ಅಮಲು ಬರಿಸುವ ವರ್ಣನೆ.... ದೊಡ್ಡವರು ಕೂಡ ದಾರಿ ತಪ್ಪಬಹುದು, ಚಿಕ್ಕವರಿಗೆ ಇಲ್ಲದ ಗೀಳು ಹಿಡಿಯ ಬಹುದು....ರುಚಿಯಾಗಿದೆ ಅಂತ ಮಸಾಲೆದೋಸೆ ತಿಂದ ಹಾಗೆ....ಅವೊತ್ತು ತಂದುಕೊಟ್ಟಿದ್ದರಲ್ಲ, ಒಂದು ತಿಂದದ್ದಕ್ಕೇ ಮೂರು ದಿನ ಹೊಟ್ಟೆ ಕೆಟ್ಟು ಹೋಗಿತ್ತು....

" ಠಣ್........"

—ಓ, ಆಗಲೇ ಹನ್ನೊಂದೂವರೆ ? ಯಾಕೆ, ಇನ್ನೂ ಬರಲಿಲ್ಲ ? ನನ್ನ ಊಹೆಯೇ ನಿಜ ಇರಬೇಕು : ಎಲ್ಲೋ ಎರಡನೇ ಆಟಕ್ಕೂ ಹೋಗಿರಬೇಕು....

ಕಾಫಿ, ಮಸಾಲೆ ದೋಸೆ, ಸಿಗರೇಟು, ಸಿನಿಮಾ........ಹೀಗೆ ಮೆಟ್ಟಲು ಮೆಟ್ಟಲಾಗಿ ಹೋಗುತ್ತೆ ಅಂತ ಕಾಣುತ್ತೆ. ಮಹಡಿ ಮುಟ್ಟಿದರೆ, ಗೊತ್ತೇ ಇದೆ....

ಅಬ್ಬಾ ! ಅವರೂ ಎಲ್ಲಾದರೂ....

ಛೆ, ಛೆ, ಇರಲಾರದು....

ಯಾಕೆ ಇರಬಾರದು ?

ಇವೊತ್ತು ಸಂಬಳ.

ನಿನ್ನೆ ತಾನೆ ಈ ಪುಸ್ತಕ ಓದಿದಾರೆ.

ಇವೊತ್ತು, ಮನೆಯ ಕಡೆ ದಾರಿಯನ್ನ ಮರೆತುಬಿಟ್ಟಿದಾರೆ....ಅಲ್ಲಾ, ನನ್ನ ಜ್ಞಾಪಕವೂ ಬರಲಿಲ್ಲವೆ ? ನಾನೇನು ಕುರೂಪಿಯೆ ? ಹಾಡೋಕೇನೋ ಬರುವುದಿಲ್ಲ, ಕುಣಿತ ಕಲಿಯುವುದಕ್ಕೆ ನಾನು ಸೂಳೆ ಕೆಟ್ಟುಹೋದೆನೆ ?

ನಿತ್ಯ ಕಚೇರಿಗೆ ಹೋಗುವಾಗ, ಸಂಜೆ ಮನೆಗೆ ಬಂದ ಕೂಡಲೆ, ಗಲ್ಲ ಹಿಡಿದು ಕೊಂಡು....ಅಯ್ಯೋ, ಅಯ್ಯೋ, ಒಂದೂ ಅವರ ನೆನಪಿಗೆ ಬರದೆ ಹೋಯಿತೆ, ಅವರನ್ನ ತಡೆದು ನಿಲ್ಲಿಸದೆ ಹೋಯಿತೆ?........ಈ ಹಾಳು ಪುಸ್ತಕ ಅವರ ಕೈಗೆ ಯಾಕಾದರೂ ಸಿಕ್ಕಿತೋ....ಖಂಡಿತ ಅವರನ್ನ ಆ ಹಾಳು ನರಕಕ್ಕೆ ಕರೆದು ಕೊಂಡು ಹೋಗಿದೆ....

ನನ್ನ ಹಣೆಯ ಬರಹ....ಐದು ವರ್ಷವಾದರೂ ಒಂದು ಮಗುವಾಗಿಲ್ಲ.... ಮಗುವಾದರೂ ಇದ್ದಿದ್ದರೆ, ಅದರ ನಗು ಮುಖವನ್ನಾದರೂ ನೆನಸಿಕೊಂಡು, ಮನೆಯ ಕಡೆಯ ದಾರಿಯನ್ನ ಮರೆಯುತ್ತಿರಲಿಲ್ಲ ಅಂತ ಕಾಣುತ್ತೆ. ಕಣ್ಣಿಗೆ ಕಾಣದೆ ಇರುವ ನರಕ ಹಾಗಿರಲಿ, ಈ ಭೂಲೋಕದ ನರಕಪ್ರಾಪ್ತಿ ತಪ್ಪಿಸ ಬೇಕಾದರೂ ಮಕ್ಕಳಿರಬೇಕು ಅಂತ ತೋರುತ್ತೆ........

ಇವೆಲ್ಲಾ ಬುಡವಿಲ್ಲದ ಊಹೆಯೋ? ನನ್ನ ಊಹೆ ನಿಜವಾಗಿ ಬಿಟ್ಟರೆ?....ಊಹೆ ನಿಜವಾದರೆ, ಗತಿ? ಅಬ್ಬಾ!....ಅಯ್ಯೋ, ಯಾರ ಕೈಲಿ ಹೇಳಿಕೊಳ್ಳಲಿ ನನ್ನ ದುಃಖವನ್ನ?

ಶ್ರೀರಾಮ, ನನ್ನ ಊಹೆ ನಿಜವಾಗದೆ ಇರಲಿ, ನಿಜವಾಗದೆ ಇರಲಿ, ನೂರು ಸಲ ನಿಜವಾಗದೆ ಇರಲಿ....

ಅಯ್ಯೋ, ಈಗ ಮೊರೆಯಿಟ್ಟರೆ ಏನು ಫಲ? ಅದು ಏನೇ ಆದರೂ, ನಡೆಯುವುದು ನಡೆದೇ ಹೋಗಿರುತ್ತೆ.

ಏನಾದರೂ ಆಗಿರಲಿ, ಸದ್ಯ ಅವರು ಮನೆಗೆ ಬಂದರೆ ಸಾಕು....ಶ್ರೀರಾಮ, ನೀನು ಸಾಕ್ಷಿ: ಅವರನ್ನ ಇಲ್ಲದ ಪ್ರಶ್ನೆ ಹಾಕಿ ಕಾಡುವುದಿಲ್ಲ....ಅವರು ಹೇಗಾದರೂ ಇರಲಿ, ಏನಾದರೂ ಮಾಡಿಕೊಳ್ಳಲಿ....ನನ್ನ ತಾಳಿ ಒಂದನ್ನ ಗಟ್ಟಿಯಾಗಿಟ್ಟಿರಪ್ಪ....ಅನಾಥರಕ್ಷಕ, ನೀನೆ ಗತಿಯಪ್ಪ ನನಗೆ.

× × × ×

—ಹಸಿದು ಬಂದರೆ, ಏನೂ ಅಂತ ಬಡಿಸಲಿ ತಂಗಳು ಅನ್ನ ಸಾರನ್ನ?

× × × ×

ಹಾಳಾದ್ದು ಏನೇನೋ ಊಹೆ, ಏನೇನೋ ಕಲ್ಪನೆ, ಏನೇನೋ ಯೋಚನೆ....

—ಹನ್ನೆರಡು ಗಂಟೆ....

" ಟಿಕ್ - ಟಿಕ್, ಟಿಕ್ - ಟಾಕ್, ಟಿಕ್ - ಟಿಕ್...."

" ಡಬ್ ಡಬ್, ಡಬ್ ಡಬ್, ಡಬ್ ಡಬ್...."

—ಅವರು ಯಾರ ಎದೆಯ ಹೊಡೆತವನ್ನ ಕೇಳುತಾ ಮಲಗಿದ್ದಾರೆಯೋ? ನನ್ನ ಎದೆಯ ಹೊಡೆತ ಕೇಳುತ್ತಿಯೇ? ಯಾವ ದಿಂಬಿಗೆ ತಲೆ ಕೊಟ್ಟಿದಾರೆಯೋ, ನನ್ನ ದಿಂಬು ಕಣ್ಣೀರು ಕುಡಿದು ಒದ್ದೆ ಮುದ್ದೆಯಾಗಿರುವುದು ಅವರ ಗಮನಕ್ಕಾದರೂ ಬಂದೀತೆ, ನಾಳೆಯಾದರೂ?

ಅಯ್ಯೋ, ಅಯ್ಯೋ, ಅಯ್ಯೋ....

× × × ×

" ಡಬ್ ಡಬ್‌ಡಬ್ ಡಬ್...."

—ನನ್ನ ಹೆಸರನ್ನೂ ಕೂಗುತಾ ಇಲ್ಲ? ಯಾರೋ ಏನು ಕಥೆಯೋ.... ಹೇಗೆ ಬಾಗಿಲು ತೆಗೆಯಲಿ?

" ಡಬಾ ಡಬ್, ಡಬಾ ಡಬ್....ಅಮ್ಮಾ, ತಾಯಿ...."

ಇದೇನು? ಅವರಲ್ಲ. ಯಾರಪ್ಪ ಇದು? ಏನು ಮಾಡಲಿ ಈಗ? ಅಯ್ಯೋ ದೇವರೆ? ಎಂಥ ಪರೀಕ್ಷೆ ತಂದೊಡ್ಡಿದೆಯಪ್ಪ ಇವೊತ್ತು....ರಾಮಕಥೆ ಓದದೆ ಕಾಮಕಥೆ ಓದಿದ್ದರ ಫಲ ಅಂತ ಕಾಣುತ್ತೆ, ನನಗೂ ಇದೆಲ್ಲ....

" ಅಮ್ಮಾ, ತಾಯೀೀೀ...."

—ದೇವರ ಮೇಲೆ ಭಾರ ಹಾಕಿ ಹೋಗಿ ಬಾಗಿಲು ತೆಗೆದುಬಿಡುತೀನಿ. ಇಷ್ಟರ ಮೇಲೆ ಆದದ್ದು ಆಗಲಿ.

" ಕಿರ್ ಕಿರ್ ಕಿರ್—ಸರ್‌ರ್‌ರ್ ಕಟ್ "

—ಹಾಳು ಬೋಲ್ಟು, ಕಡೆಗೂ ಬಂತಲ್ಲ.

" ಯಾರಪ್ಪ, ಯಾರೂ ಅದು....ಏನಾಗಬೇಕಾಗಿತ್ತು? ಅವರ ಮೈಗೆ ಸರಿ ಇಲ್ಲ, ಮಲಗಿದ್ದಾರೆ........ಯಾರು ಬೇಕಾಗಿತ್ತು...."

" ಭಯ ಬೀಳಬೇಡಿರಿ ತಾಯಿ, ಬಾಗಿಲು ತೆಗೀರಿ; ಪರವಾಗಿಲ್ಲ."

" ನೀವು ಯಾರು ಹೇಳಿ....ಆ ಮೇಲೆ...."

" ನಾನು....ಜವರಯ್ಯ....ಪೋಲೀಸು ಕಾನ್‌ಸ್ಟಿಬಿಲ್ಲು...."

" ಠಣ್, ಠಣಾ, ಠಣ್...."

" ಹ್ಹಾ, ಪೋಲೀಸಿನೋರೆ!....ಅಯ್ಯೋ....ಅಪ್ಪಾ...."

× × × ×

" ಯಾರು ? ಯಾರು ? ಪೋಲೀಸಿನೋರೆ ?....ಇದೇನು, ಸುಭದ್ರಮ್ಮ ನೋರು ! ಯಾಕೆ, ಸುಭದ್ರಮ್ಮನೋರೆ, ನೀವು ಇಲ್ಲಿ ಬಂದಿದ್ದೀರಿ ? ಲೀಲಾ, ವೆಂಕಟರಾಯರು!....ಏನಾಗಿದೆ...."

" ಎಚ್ಚರ ಮಾಡಿಕೋ ತಾಯಿ....ಹಾಗೆ, ಹಾಗೆ....ನನ್ನ ತೊಡೆಯ ಮೇಲೆ ಮಲಗಿರಮ್ಮ, ಪರವಾಯಿಲ್ಲ. ನಮ್ಮ ಲೀಲಾ ಹಾಗೇನೇ ನೀನೂನೂ....ಲೀಲಾ, ಕಾಫಿ ಕೊಡಿಲ್ಲಿ....ನಾಚಿಕೊಳ್ಳಬೇಡ ಮೋಹಿನಿ, ಇನ್ನೊಂದು ಗುಟುಕು ಕುಡಿ ತಾಯಿ....ಹಾಗೇ, ಹಾಗೆ...."

" ಸಾಕು ಸುಭದ್ರಮ್ಮನವರೆ, ಅವರೆಲ್ಲಿದಾರೆ, ಹೇಳಿ, ಬೇಗ ಹೇಳಿ.... ಅರೆಸ್ಟ್ ಮಾಡಿದಾರೆಯೋ, ಏನು ಕಥೆ...."

" ಏನೂ ಇಲ್ಲ ಅಮ್ಮಾ, ಗಾಬರಿಪಟ್ಟುಕೊಳ್ಳಬೇಡ. ಅವರು ಆಸ್ಪತ್ರೆ ಯಲ್ಲಿದಾರಂತೆ, ಸೌಖ್ಯವಾಗಿದಾರೆ........ಅಲ್ಲವೇನಪ್ಪ....?"

" ಹೌದ್ರು ತಾಯಿ. ಗೋಪಾಲ ಕೃಷ್ಣಪ್ಪನೋರು, ಅವರೇ ತಾನೇ ನಿಮ್ಮ ಯಜಮಾನರು....ಸಂಜೆ ಕಚೇರಿಯಿಂದ ಸಂಬಳಾ ತರುತಾ ಇದ್ರೋರು, ಆತುರಾತುರವಾಗಿ ನಿಗಾ ಮಾಡಗದೆ ಬರ್ತಾ ಇದ್ರು ಅಂತ ಕಾಣುತ್ತೆ....ಕಾರಿಗೆ ಸಿಕ್ಕಿದರು....ತಲೆ ತುಂಬ ಪೆಟ್ಟಾಯಿತು....ಜ್ಞಾನ ತಪ್ಪಿತು....ಕಾರಿನೋನ ದೇನೂ ತಪ್ಪಿಲ್ಲ ತಾಯಿ, ಎಲ್ಲಾ ವಿಚಾರಣೆ ಆಯ್ತು....ತಮ್ಮ ಕಾರಿನಲ್ಲೇ ಆಸ್ಪತ್ರೆಗೆ ತಂದು ಬಿಟ್ಟರು....ಅವರಿಗೆ ಜ್ಞಾನ ಬಂದದ್ದು ಹನ್ನೊಂದೂವರೆ ಹೊತ್ತಿಗೆ....ಅಲ್ಲೀವರೆಗೂ ಆಸಾಮಿ ಯಾರೂ ಅನ್ನೋದೆ ಗೊತ್ತಾಗ್ನಿಲ್ಲ.... ಆಮೇಲೆ ಮನೇ ಅಡ್ರೆಸ್ಸು ಹೇಳಿದ್ರು, ಮುಕ್ಕಾಲು ಪಾಲು ಮುಂದುಗಡೆ ಕೋಣೇಲಿ ದೀಪ ಉರೀತಾನೇ ಇರ್ತದೆ ಅಂತಲೂ ಹೇಳಿದ್ರು....ಭರ್ರನೆ ಬೈಸಿಕಲ್ ಮೇಲೆ ಬಂದೆ....ನೀವೂ ಎಚ್ರಾಗಿದ್ರಿ....ಆದರೆ ಭೋ ಗಾಬರ ಬಿದ್ರಿ....ಅಷ್ಟು ಗಾಬರ ಬೀಳಬಾರದ್ರವ್ವ....ಇನ್ನು ನಾನು ಬರ್ತೀನಿ. ಸುಖವಾಗಿ ಮನಿಕ್ಕೊಳ್ಳಿ. ಬೆಳಗ್ಗೆ ಅವರೇ ಹಾಜರಾಗ್ತಾರೆ: ಬರಲಿಲ್ಲ, ಡಾಕ್ಟರು ಬೇಡ ಅಂದ್ದಿದಾರೆ ಅಂತ ಮಡಿಕ್ಕೊಳ್ಳಿ. ನೀವೇ ಆಸ್ಪತ್ರೆಗೆ ದಯಮಾಡಿ...,ಅದೇನೋ

ನಂಬರು ಹೇಳಿದ್ರು, ವಾಲ್ಯು ನಂಬರು....ಮರೆತೇ ಹೋಯ್ತೇ ಹಾಳಾದ್ದು....
ಬಿಡಿ, ಯಾಕೆ ಭಯ ಬೀಳ್ತೀರ, ನಾನೇ ಬೆಳಗ್ಗೆ ಬಂದು ನೋಡಿಕೊಂಡು
ಹೋಗ್ತೀನಿ...."

"ಅಷ್ಟು ಉಪಕಾರ ಮಾಡಪ್ಪ....?

"ನಮಸ್ಕಾರ ರಾಯರೆ. ನಾನು ಬರ್ತೀನಿ ತಾಯಿ"

× × × ×

"ಇನ್ನು ನೀವು ಹೊರಡಿ. ಲೀಲಾ ನೀನೂ ಹೋಗಮ್ಮ. ನಾನು
ಇಲ್ಲೇ ಮಲಗಿಕೊಳ್ಳುತೀನಿ. ಸ್ವಲ್ಪ ನನ್ನ ಹಾಸಿಗೆ ತಂದುಕೊಟ್ಟುಬಿಡಿ...."

"ಬಾ ಲೀಲಾ, ಹಾಸಿಗೆ ಕೊಡುತೀನಿ, ತಗೊಂಡು ಹೋಗುವೆಯಂತೆ...."

"ನೀನೇ ತಂದು ಬಿಡಣ್ಣ...."

× × × ×

"ಹ್ಞೂ, ಹಾಸಿಗೆ ತಗೊಳ್ಳಿ. ನೀನೂ ಇಲ್ಲೇ ಮಲಗಿಕೊಳ್ಳುತೀಯೋ
ಇಲ್ಲಾ ಬರ್ತೀಯೋ, ಲೀಲಾ...."

"ಬರ್ತೀನಿ, ಹೋಗಣ್ಣ...."

"ಮೋಹನಮ್ಮನೋರೆ, ಈ ಪುಸ್ತಕ ತೆಗೆದುಕೊಂಡಿದ್ದು, ನಾಳೀನೇ...."

ಮೋಹಿನಿ ಸರ್ರನೆ ಎದ್ದುಹೋಗಿ, ಪುಸ್ತಕವನ್ನ ಲೀಲನ ಕೈಯಿಂದ
ಕಿತ್ತುಕೊಂಡು, ಡ್ರಾಯರಿನೊಳಗೆ ಹಾಕಿ ಭದ್ರಪಡಿಸಿದಳು. ಲೀಲಾ
ಅಸಮಾಧಾನಗೊಂಡವಳಂತೆ ಬಿರಬಿರನೆ ಹೊರಟಳು.

"ಎಲ್ಲಾ ಗಂಡಸರೂ ಒಂದೇ ಅಲ್ಲ ಸುಭದ್ರಮ್ಮನೋರೆ. ನಿಮ್ಮ
ಯಜನಮಾನರು, ನನ್ನ ಯಜಮಾನರು....ಲೀಲಾ ತೆಗೆದುಕೊಂಡಿದ್ದಳು
ನೋಡಿ, ಆ ಪುಸ್ತಕ ಓದಿ, ನಮ್ಮ ಯಜಮಾನರ ವಿಚಾರ ಏನೇನೋ ಊಹೆ
ಕಟ್ಟುತ್ತಾ ಇದ್ದೆ. ಊಹೆ ನಿಜವಾಗಿಬಿಟ್ಟರೆ ಏನಪ್ಪ ಗತಿ ಅಂತಿದ್ದೆ. ದೇವರ
ದಯದಿಂದ...."

"ಅದು ಏನು ಪುಸ್ತಕ?"

"ಇಂಗ್ಲಿಷ್ ಪುಸ್ತಕ, ನಿಮಗರ್ಥವಾಗುವುದಿಲ್ಲ."

# ಪರಿಹಾರ

ಉತ್ತಮ ಸಾಹಿತ್ಯಗ್ರಂಥ ಸಮಾಜದ ಸಮಸ್ಯೆಗಳಿಗೂ ಸಂದೇಹಗಳಿಗೂ ಪರಿಹಾರವನ್ನೊದಗಿಸುತ್ತದೆಯೆಂದು ಸಾಹಿತ್ಯವಿಮರ್ಶಕರನೇಕರು ಅಭಿಪ್ರಾಯ ಪಟ್ಟಿದ್ದಾರೆ. ಇದು ಅನುಭವದ ಮಾತೂ ಹೌದು. ಕವಿ ಸಮಾಜದ ಮೇಲೆ ಪರೋಕ್ಷವಾಗಿ ಒಂದು ಅಗಾಧ ಪರಿಣಾಮ ಬೀರುತ್ತಾನೆ; ಅವನು ಕೋಣೆಯೊಳಗೊ ಮರದಡಿಯ ತಣ್ಣೆಳಲಿನಲ್ಲೊ ಕುಳಿತು ಚಿಂತಿಸುವ ಚಿಂತನೆಗಳಿಗೂ ಕಲ್ಪಿಸುವ ಕಲ್ಪನೆಗಳಿಗೂ ಭಾವಿಸುವ ಭಾವನೆಗಳಿಗೂ ಆ ಪರಿಣಾಮಕಾರಕ ಸಾಮರ್ಥ್ಯವಿದೆ. ಎಷ್ಟೋ ಮಂದಿ ಕವಿವಾಕ್ಯದಿಂದ ಧೈರ್‍ಯಸ್ಥೈರ್‍ಯ ಶಾಂತಿ ಸಮಾಧಾನಗಳನ್ನು ಹೊಂದಿ ಬಾಳಿನಲ್ಲಿ ಬೆಳಕು ಕಂಡಿದ್ದಾರೆ. ಒಬ್ಬ ಕವಿಯ ಕಾವ್ಯದಿಂದ ಪಡೆಯಲಾಗದ ಪರಿಹಾರವನ್ನು ಆ ಕವಿಯಿಂದಲೆ ಪಡೆಯಹೋದರೆ ಏನಾದೀತು ? ಆ ಪರಿಹಾರ ದೊರಕೀತೆ ? ದೊರೆಯದೆ ಹೋದರೋ ? ದೊರೆಯುವ ಸಂಭವವಾದರೂ ಉಂಟೆ ? ಈ ಪ್ರಶ್ನೆಗಳಿಗೆ ಉತ್ತರ ಹೇಳುವುದು ಕಷ್ಟ. ಒಂದು ವ್ಯಕ್ತಿ ಕವಿಯೊಬ್ಬನಿಂದ ಪರಿಹಾರ ಬಯಸಿದ ಸಂದರ್ಭವೊಂದು ಮಾತ್ರ ನನ್ನ ಅನುಭವಕ್ಕೆ ಬಂದಿದೆ. ಅದನ್ನು ಇಲ್ಲಿ ಹೇಳಹೊರಟದ್ದೇನೆ.

ನಾಗಭೂಷಣ ನನ್ನ ಆಪ್ತಮಿತ್ರ. ಕಾವ್ಯಲೇಖನ ಕಾವ್ಯಾಭಿರುಚಿಗಳೇ ನಮ್ಮ ಗಾಢಸ್ನೇಹಕ್ಕೆ ಕಾರಣ. ಅವನು ತಾನು ಬರೆದ ಕಥೆ ಮುಂತಾದುವನ್ನು ನನಗೆ ಓದಿ ಹೇಳಿ ನನ್ನ ಅಭಿಪ್ರಾಯವನ್ನು ಪಡೆಯುವುದೂ, ಹಾಗೆಯೆ ನಾನು ಬರೆದ ಲೇಖನಗಳನ್ನು ಅವನಿಗೆ ತೋರಿ ಅವನ ಅಭಿಪ್ರಾಯವನ್ನು ಬಯಸುವುದೂ ನಮ್ಮಿಬ್ಬರಲ್ಲಿಯೂ ಎಂದಿನಿಂದಲೂ ಬಂದಿರುವ ರೂಢಿ. ಇಷ್ಟು ಮಾತ್ರವಲ್ಲ. ನಾವಿಬ್ಬರೂ ಪರಸ್ಪರ ಹೇಳಿಕೊಳ್ಳದ ಅಂತರಂಗ ವಿಚಾರಗಳು ಯಾವುವೂ ಇಲ್ಲ. ಕವಿಮನೋಧರ್ಮಕ್ಕೆ ಸಹಜವಾಗಿ ಅವನು ಜನ್ಮತಃ ಸೌಂದರ್‍ಯಪ್ರೇಮಿ. ದುರದೃಷ್ಟವಶದಿಂದ ಅವನಿಗೆ ಕುರೂಪಿಯಾದ ಹೆಂಡತಿ ಗಂಟುಬಿದ್ದಿದ್ದಳು. ಕವಿ ಸಹಜವಾದ ಕರುಣೆಯಿಂದಲೇ ಅವನು ಒಲ್ಲದ ಹೆಂಡತಿಯೊಂದಿಗೆ ನಿಷ್ಠೆಯಿಂದ ಸಂಸಾರ ಸಾಗಿಸುತ್ತ, ತನ್ನ ಸೌಂದರ್‍ಯ

ಪ್ರೇಮವನ್ನೆಲ್ಲ ಕಾವ್ಯರೂಪದಲ್ಲಿ ಹರಿಯಿಸುತ್ತಿದ್ದ. ವಾಸ್ತವಪ್ರಪಂಚದಲ್ಲಿ ತನ್ನ ಪಾಲಿಗೆ ಇಲ್ಲವಾಗಿದ್ದ ಪ್ರೇಮಸುಧೆಯನ್ನು ಕಲ್ಪನಾಪ್ರಪಂಚದಲ್ಲಿ ಪಾನಮಾಡು ತ್ತಿದ್ದ. ಕಲ್ಪನಾಸುಂದರಿಯೆ ಅವನ ಪ್ರಣಯಿನಿ.

ಈ ಕಲ್ಪನಾಜೀವಿಗೆ ಅನಿರೀಕ್ಷಿತವಾದ ಕಡೆಯಿಂದ ಒಂದು ಕಾಗದ ಬಂದಿತು. ಅದನ್ನು ತಂದು ಅವನು ನನಗೆ ತೋರಿದ. ಕಾಗದ ಈ ರೀತಿ ಇತ್ತು :

" ಶ್ರೀಯುತರಿಗೆ ಪ್ರೇಮಪೂರ್ವಕ ವಿಜ್ಞಾಪನೆಗಳು. ನನ್ನ ಈ ಕಾಗದ ವನ್ನು ನೋಡಿ ನಿಮಗೆ ಆಶ್ಚರ್ಯವಾಗಬಹುದು. ಹೆಂಗಸೊಬ್ಬಳು ಪರಿಚಯ ವಿಲ್ಲದ ಪರಪುರುಷನಿಗೆ ಹೀಗೆ ಕಾಗದ ಬರೆದರೆ ಆಶ್ಚರ್ಯವಾಗುವುದು ಸಹಜ ವಾಗಿಯೇ ಇದೆ. ಆದರೆ ನನ್ನ ಸ್ಥಿತಿ ಏನೆಂಬುದನ್ನು ಇಲ್ಲಿ ನಾನು ವಿವರಿಸಲಾರೆ. ದಾಂಪತ್ಯ ಸುಖದಲ್ಲಿ ವಂಚಿತಳಾದ ಹತಭಾಗಿನಿ ಎಂದು ಹೇಳಿದರೆ ಕವಿಗಳಾದ ನೀವು ಸುಲಭವಾಗಿ ಊಹಿಸಿಕೊಳ್ಳಬಲ್ಲಿರಿ.

" ನನ್ನ ಪರಿಚಯ ನಿಮಗಿಲ್ಲದಿದ್ದರೂ ನಿಮ್ಮ ಕೃತಿಗಳ ಮೂಲಕ ನಿಮ್ಮ ಪರಿಚಯ ನನಗೆ ಆಗಿದೆ. ನಿಮ್ಮ ಪ್ರಣಯ ಗೀತೆಗಳನ್ನು ಓದಿ ಅವುಗಳ ಪ್ರೇಮಭಾವದಲ್ಲಿ ಓಲಾಡಿ, ಆನಂದದ ಜೊತೆಗೆ ಅಶಾಂತಿಯನ್ನೂ ಪಡೆದಿದ್ದೇನೆ ನಿಮ್ಮ ಕತೆಗಳಲ್ಲಿ ಹೆಣ್ಣಿನ ಹೃದಯವನ್ನು ನೀವು ಚೆನ್ನಾಗಿ ಅರ್ಥಮಾಡಿ ಕೊಂಡಿದ್ದೀರೆಂದು ನನಗನ್ನಿಸಿತು. ನಾನು ಅನೇಕರ ಕಥೆ ಕಾದಂಬರಿಗಳನ್ನು ಓದಿದ್ದೇನೆ. ಅನೇಕ ಲೇಖಕರು ಸ್ತ್ರೀ ಪಾತ್ರಗಳನ್ನು ಸಹಾನುಭೂತಿಯಿಂದಲೇ ಚಿತ್ರಿಸುವುದು ಈಗ ಕಾಣಬರುತ್ತಿದೆ. ಆದರೆ ಹೆಣ್ಣಿನ ಬಗ್ಗೆ, – ಅದರಲ್ಲಿಯೂ ಜೀವನದಲ್ಲಿ ನೊಂದ, ಕೆಳಕ್ಕೆ ಬಿದ್ದ, ದಾರಿ ತಪ್ಪಿದ, ಹೆಣ್ಣಿನ ಬಗ್ಗೆ, – ನೀವು ತೋರಿರುವ ಸಹಾನುಭೂತಿಯ ಸವಿಕಟ್ಟನ್ನು ನಾನು ಬೇರೆ ಎಲ್ಲಿಯೂ ಕಾಣಲಾಗಿಲ್ಲ. ನಿಮ್ಮ ಕೃತಿಗಳನ್ನು ಓದಿಯೇ ನಾನು ಶಾಂತಿ ಸಮಾಧಾನ ಗಳನ್ನು ಪಡೆಯಲು ಬಹಳ ಪ್ರಯತ್ನಪಟ್ಟೆ. ನನ್ನ ದುರದೃಷ್ಟಕ್ಕೆ ಅವು ದೊರಕಲಿಲ್ಲ. ಶಾಂತಿ ಸಮಾಧಾನಗಳು ದೊರಕಿದರೆ ನನ್ನ ಸಮಸ್ಯೆಗೆ ಪರಿಹಾರ ದೊರೆತಂತೆಯೇ.

" ಕೆಲವು ಕನ್ನಡ ವಾರಪತ್ರಿಕೆಗಳಲ್ಲಿ ವಾಚಕರ ಸಮಸ್ಯೆಗಳಿಗೆ ಉತ್ತರ ಗಳನ್ನು ಪ್ರಕಟಿಸುತ್ತಾರೆ. ಒಂದು ಪತ್ರಿಕೆಗೆ ನನ್ನ ಸಮಸ್ಯೆ ಕಳುಹಿಸಿ ಪರಿಹಾರ ಪಡೆಯೋಣವೆಂದು ಆಲೋಚಿಸಿದೆ. ಅನೇಕ ಕಾರಣಗಳಿಂದ ಆ ಆಲೋಚನೆ

ಯನ್ನು ಕೈಬಿಟ್ಟೆ. ಮುಖ್ಯವಾಗಿ, ನನ್ನ ಸಮಸ್ಯೆಯನ್ನು ಒಂದೆರಡು ವಾಕ್ಯಗಳಲ್ಲಿ ತಿಳಿಸಿ ಮುಗಿಸಲು ಸಾಧ್ಯವಿಲ್ಲ; ಸಾಧ್ಯವಾದರೂ, ನನ್ನ ಹೃದಯದ ಅಂತರ್‍ಯದ ಪ್ರಾಮಾಣಿಕವಾದ ಭಾವನೆಗಳು ಸಾವಿರಾರು ಮಂದಿಯ ಗಮನಕ್ಕೆ ಬಂದು, ಕಾಲಕ್ರಮದಲ್ಲಿ 'ನಮ್ಮವರ' ಗಮನಕ್ಕೂ ಬರುವುದು ನನ್ನ ಮನಸ್ಸಿಗೆ ಒಪ್ಪಿಗೆಯಿಲ್ಲ; ಆ ಉತ್ತರಗಳು, ಕೇಳಿದ ಪ್ರಶ್ನೆಗಳಿಗೆಲ್ಲಾ ಕಚೇರಿಯ ಬೇಸರವನ್ನು ಕಳೆದುಕೊಳ್ಳುವುದಕ್ಕಾಗಿ ಕೊಡುವ ಚಮತ್ಕಾರದ ಉತ್ತರಗಳೆಂದು ನನ್ನ ಭಾವನೆ. ಈ ಕಾರಣಗಳಿಂದ ಈಗ ನಿಮ್ಮನ್ನು ಮರೆಹೊಕ್ಕಿದ್ದೇನೆ. ನಿಮ್ಮಿಂದ ನನ್ನ ಸಮಸ್ಯೆಗೆ ಪರಿಹಾರ ದೊರಕದೆ ಹೋದರೂ ನಿಮ್ಮ ಕವಿ ಹೃದಯದ ಸವಿ ಮರುಕಕ್ಕಾಗಿ ಹಾತೊರೆಯುತ್ತಿದ್ದೇನೆ. ಈ ಕಾಗದ ನಿಮ್ಮ ಕೈಸೇರಿದ ಒಂದು ವಾರದೊಳಗಾಗಿಯೆ ನೀವು ನಮ್ಮ ಮನೆಗೆ ದಯಮಾಡಿಸಿ ನನ್ನನ್ನು ಕೃತಾರ್ಥಳನ್ನಾಗಿ ಮಾಡಬೇಕು. ನಿಮ್ಮ ಗುರುತಿಗಾಗಿ ಈ ಕಾಗದ ತಂದರೆ ಸಾಕು."

ಮನೆಯ ವಿಳಾಸ ಕೆಳಗೆ ಬರೆದಿತ್ತು.

ಕಾಗದ ಓದಿಯಾದ ಮೇಲೆ, "ಅಕ್ಷರ ಮುತ್ತಿನ ಹಾಗೆ ಇದೆ. ಭಾಷೆ ಶೈಲಿ ಮುದ್ದಾಗಿದೆ. ಸಾಹಿತ್ಯ ವ್ಯಾಸಂಗದ ಸಂಸ್ಕಾರ ಪತ್ರದ ಒಕ್ಕಣೆಯಲ್ಲಿ ಎದ್ದು ಕಾಣುತ್ತದೆ. ನಾವೇ ಆದರೂ ಇದಕ್ಕಿಂತ ಚೆನ್ನಾಗಿ ಪತ್ರ ಬರೆಯಲು ಸಾಧ್ಯವಿಲ್ಲ" ಎಂದು ನಾನು ಹೊಗಳಿದೆ.

"ಅದು ಹಾಗಿರಲಿ. ಈಗ ಏನು ಮಾಡಲಿ?" ಎಂದು ನನ್ನ ಸಲಹೆ ಕೇಳಿದ ನಾಗಭೂಷಣ.

"ಕಾಗದ ಎಂದು ಬಂತು?"

"ನಿನ್ನೆ ತಾನೆ ನನ್ನ ಕೈಸೇರಿತು. ನನ್ನ ಪ್ರಕಾಶಕರ ವಿಳಾಸಕ್ಕೆ ಬಂದಿತ್ತು. ಅವರು ನನಗೆ ಕಳಿಸಿಕೊಟ್ಟಿದ್ದಾರೆ. ೧೦ನೆಯ ತಾರೀಖು ಬರೆದ ಕಾಗದ. ಇವೊತ್ತು ೧೬. ಹೋದರೆ ನಾಳೆಯೇ ಹೋಗಬೇಕು."

"ಹೋಗು" ಎಂದೆ ನಾನು, ನಗುತ್ತ.

ನನ್ನ ನಗೆಯ ಅರ್ಥವನ್ನು ನಾಗಭೂಷಣ ಗ್ರಹಿಸಿದನೆಂದು ಕಾಣುತ್ತದೆ. ದೃಢನಿಶ್ಚಯದಿಂದ ನುಡಿದ :

"ನಾನು ಹೋಗುವುದು ಸರಿಯಲ್ಲ. ನೀನೇ ಹೋಗು."

"ಆದರೆ, ಕಾಗದ ನನಗೆ ಬಂದಿಲ್ಲವಲ್ಲ ?"

"ಅದರಿಂದ ಬಾಧಕವಿಲ್ಲ. ಕಾಗದ ಬರೆದ ತರುಣಿ ನಮ್ಮಿಬ್ಬರ ಮುಖ ವನ್ನೂ ನೋಡಿಲ್ಲ. ನನ್ನ ಸ್ಥಾನದಲ್ಲಿ ನೀನು ನಿಂತು ಅವಳ ಸಮಸ್ಯೆ ಪರಿಹರಿಸು. ನನಗಿಂತ ನಿನಗೆ ಹೆಚ್ಚಿನ ಅರ್ಹತೆಗಳಿವೆ" ಎಂದು ನಾಗಭೂಷಣನೂ ಈ ಸಲ ನಕ್ಕ.

"ಅದಿರಲಿ, ಅವಳು ತರುಣಿ ಎಂಬುದು ನಿನಗೆ ಹೇಗೆ ಗೊತ್ತು ?" – ನಾನು ಕೇಳಿದೆ.

"ಕಾಗದದಲ್ಲಿ ಅವಳ ಹೆಸರು ನೋಡಿದೆಯೋ ಇಲ್ಲವೊ ? ಆಧುನಿಕ ಹೆಸರು – ಮಾಲಿನಿ ! ನಮ್ಮ ಸೀಮೆಯಲ್ಲಿ ಕೇವಲ ಹತ್ತಿಪ್ಪತ್ತು ವರ್ಷಗಳ ಈಚೆಗೆ ಇಟ್ಟಿರಬಹುದಾದ ಹೆಸರು."

"ಹಾಗಾದರೆ ಅವಳು ಚೆಲುವೆಯೂ ಆಗಿರಬೇಕಲ್ಲವೇ ?"

"ಕಾಗದದಿಂದಾಗಲಿ ಹೆಸರಿನಿಂದಾಗಲಿ ಅದನ್ನು ಹೇಗೆ ಊಹಿಸ ಬಹುದು ? ಹೋಗಿ ನೋಡಿಯೇ ತಿಳಿಯಬೇಕು. ನಿನಗೆ ಆ ಕುತೂಹಲವೂ ಇರುವುದರಿಂದ ನೀನೇ ಹೋಗುವುದು ಯುಕ್ತ."

"ನಿನಗೆ ಆ ಕುತೂಹಲ ಇಲ್ಲವೊ ?"

"ನನಗೂ ಆ ಕುತೂಹಲ ಉಂಟಾದದ್ದರಿಂದಲೇ ತಡೆದು ತಡೆದು ಸುಮ್ಮನಾದೆ. ನಾನು ಮದುವೆಯಾದವನು. ಇಲ್ಲದ ತೊಡಕನ್ನು ನಾನಾಗಿ ತಂದು ಹಾಕಿಕೊಳ್ಳಲು ಇಷ್ಟಪಡುವುದಿಲ್ಲ. ನೀನಾದರೆ –"

"ಕಂಡವರ ಮಕ್ಕಳನ್ನು ಬಾವಿಗೆ ಇಳಿಸಿ ಆಳ ನೋಡಬಯಸು ತ್ತೀಯೋ ?"

"ನಿನ್ನ ವಿಷಯದಲ್ಲಿ ನನಗೆ ನಂಬಿಕೆ ಇರುವಷ್ಟು ನನ್ನ ವಿಷಯದಲ್ಲಿ ನನಗೇ ನಂಬಿಕೆಯಿಲ್ಲ. ನನ್ನ ಚಂಚಲಚಿತ್ತ ಕಷ್ಟದಲ್ಲಿ ಸಿಲುಕಿರುವ ಚೆಲುವೆಯ ಎದುರಿನಲ್ಲಿ ಕನಿಕರಕ್ಕೆ ಎಡೆಕೊಡಬಹುದು ; ಕನಿಕರ ಪ್ರೇಮಕ್ಕೆ ತಿರುಗ ಬಹುದು ; ಪ್ರೇಮ ಅನಾಹುತದಲ್ಲಿ ಪರಿಣಮಿಸಬಹುದು. ಸಾಹಿತ್ಯಪ್ರಪಂಚ ದಲ್ಲಿ ಕಾಲ್ಪನಿಕ ವ್ಯಕ್ತಿಗಳಿಂದ ಮಾಡಿಸುವ ಸಾಹಸಕೃತ್ಯಗಳನ್ನು ವಾಸ್ತವ ಪ್ರಪಂಚದಲ್ಲಿ ನಾನೇ ಪ್ರಯೋಗಮಾಡಿನೋಡಲು ಹಿಂಜರಿಯುತ್ತೇನೆ."

"ಹಾಗಾದರೆ ಆ ಪ್ರಯೋಗವನ್ನು ನೀನೇ ಮಾಡು ಎಂದು ನನಗೆ ಹೇಳುತ್ತೀಯೋ ?"

"ಹೌದು. ನೀನು ಸ್ವತಂತ್ರ."

ಸೌಂದರ್ಯಪ್ರೇಮಿಯಾದ ನಾಗಭೂಷಣನ ಶಂಕೆ ನನಗೆ ಅರ್ಥವಾಯಿತು. ಅವನು ವಹಿಸಿದ ಕಾರ್ಯಭಾರವನ್ನು ಒಪ್ಪಿಕೊಂಡೆ.

೨

ಮಾಲಿನಿಯ ಮನೆ ಸಿಕ್ಕುವುದು ನನಗೇನೂ ಕಷ್ಟವಾಗಲಿಲ್ಲ. ಅವಳು ಕೊಟ್ಟಿದ್ದ ವಿಳಾಸ ಸುಸ್ಪಷ್ಟವಾಗಿತ್ತು; ಅದನ್ನು ಒಂದು ಚೀಟಿಯ ಮೇಲೆ ಗುರುತು ಹಾಕಿ ನನಗೆ ಕೊಟ್ಟಿದ್ದ ನಾಗಭೂಷಣ.

ನಾನು ಪ್ರವೇಶಿಸಿದ ಮನೆ ಭವ್ಯವಾದ ಕಟ್ಟಡ. ಮನೆಯ ಮುಂದಿನ ಕೈತೋಟಕ್ಕೆ ಮಾಲಿ ನೀರೆರೆಯುತ್ತಿದ್ದ. ಸಂಜೆಯ ಸ್ವರ್ಣಪ್ರಭೆ ತೋಟದ ಹೂಗಿಡಗಳಿಗೆ ಅಪೂರ್ವ ಶೋಭೆಯನ್ನು ನೀಡಿತ್ತು. ಮನೆಯೊಳಗೂ ಅಂತಹುದೇ ಪ್ರಭೆಯನ್ನು ಚೆಲ್ಲುವ ಸ್ವರ್ಣ ಪುತ್ಥಳಿಯನ್ನು ಕಾಣುವ ಕಾತರದಿಂದ ಕೈಸಾಲೆಯ ಮೆಟ್ಟಲುಗಳನ್ನು ಏರಿಹೋದೆ. "ಅಮ್ಮಾವರು ಇದ್ದಾರೆಯೇ ?" ಎಂಬ ನನ್ನ ಪ್ರಶ್ನೆಗೆ ಅಲ್ಲಿ ಕಸಗುಡಿಸುತ್ತಿದ್ದ ಕೆಲಸದವಳು—

"ಯಾರು ? ಏನಾಗಬೇಕಾಗಿತ್ತು ?" ಎಂದು ಕೇಳಿದಳು. ಅವಳ ಪ್ರಶ್ನೆಯಲ್ಲಿ ಅಸಮಾಧಾನದ ಆಶ್ಚರ್ಯ ಕಂಡುಬರುತ್ತಿತ್ತು. ತಾನು ಎಂದೂ ಕಾಣದ ಪರಪುರುಷನೊಬ್ಬನು ಮನೆಯ 'ಅಮ್ಮಾವರನ್ನು' ಭೇಟಿ ಮಾಡಲು ಬಂದರೆ ಮನೆಗೆಲಸದವಳಿಗಾದರೂ ಸಂದೇಹ ಬರುವುದು ಸ್ವಾಭಾವಿಕ; ಆ ಸಂದೇಹ ಅಸಮಾಧಾನಕ್ಕೂ ಆಶ್ಚರ್ಯಕ್ಕೂ ಎಡೆಗೊಡುವುದೂ ಸಹಜ.

"ಬರಹೇಳಿದ್ದರು. ಅದಕ್ಕಾಗಿ ಬಂದೆ."

ಅವಳ ಆಶ್ಚರ್ಯ ಇಮ್ಮಡಿಸಿದಂತೆ ಕಂಡಿತು ನನಗೆ.

"ಹಂಗಾ! ಹಂಗಾದರೆ ಸರಿ, ಬಂದೆ" ಎಂದು ಒಳಕ್ಕೆ ಹೋಗಿ, ಬೇಗನೆ ಹಿಂದಿರುಗಿ, "ಒಳಕ್ಕೆ ಬನ್ನಿ. ಕುಂತುಕೊಳ್ಳಿ. ಅಮ್ಮಾವರು ಬರ್‍ತಾರೆ" ಎಂದು ಹೇಳಿ ತನ್ನ ಕೆಲಸದಲ್ಲಿ ತೊಡಗಿದಳು.

ನಾನು ಒಳಕ್ಕೆ ಹೋಗಿ, ಮುಂಬಾಗಿಲ ಹತ್ತಿರವೆ ಇದ್ದ ಒಂದು ಸೋಫಾದ ಮೇಲೆ ಕುಳಿತೆ. ಮನೆ ಸುಸಜ್ಜಿತವಾಗಿತ್ತು. ಗೋಡೆ ಬಗೆಬಗೆಯ ವರ್ಣಚಿತ್ರಗಳಿಂದ ಅಲಂಕೃತವಾಗಿತ್ತು. ಒಂದು ಮೂಲೆಯಲ್ಲಿ ಎತ್ತರವಾದ ಕಾಲುಮಣೆಯ ಮೇಲೆ ಚಿತ್ರಜಾಲದ ಬಿಳಿಯ ಬಟ್ಟೆಯ ಗವಸುಹಾಕಿದ್ದ ರೇಡಿಯೋ ಇದ್ದಿತು. ಹಾಜಾರದ ನಡುವೆ ದುಂಡು ಮೇಜಿನ ಸುತ್ತಲೂ ಮೂರು ಕರಿಯ ಮರದ ಸೊಗಸಾದ ಕುರ್ಚಿಗಳಿದ್ದುವು. ಮೇಜಿನ ಮೇಲೆ ಸೊಗಸಾದ ವರ್ಣರಂಜಿತ ಚಿತ್ರವಸ್ತ್ರ ; ಅದರ ಮೇಲೆ ಪುಷ್ಪಪಾತ್ರೆ ; ಅದರಲ್ಲಿ ಆಗತಾನೆ ಕೊಯ್ದಿಟ್ಟಿದ್ದ ಸುಮನೋಹರವಾದ ಪುಷ್ಪಮಂಜರಿ. ಒಟ್ಟಿನಲ್ಲಿ, ಶ್ರೀಮಂತಿಕೆಯ ಕುರುಹುಗಳು ಸಾಕಷ್ಟಿದ್ದುವು.

ಸಂಜೆಯ ನಸುಗತ್ತಲೆಯ ನೆರಳು ಮೆಲ್ಲಮೆಲ್ಲನೆ ಮನೆಯೊಳಕ್ಕೆ ಅಡಿಯಿಡುತ್ತಿತ್ತು. ಕರವಸ್ತ್ರವನ್ನು ಬೆರಳಿಗೆ ಸುತ್ತಿ ಬಿಚ್ಚುತ್ತ ನಾನು ಮೌನವಾಗಿ ಕುಳಿತಿದ್ದೆ. ಇದ್ದಕ್ಕಿದ್ದ ಹಾಗೆ ಮನೆಯೊಳಗು ಬೆಳಗಿತು: ಮನೆಯೊಡತಿ ಒಳಗೋಣೆಯೊಂದರಿಂದ ಹೊರಬಂದು, ಬರುವಾಗಲೇ ದೀಪದ ಸ್ವಿಚ್ಚು ಹಾಕಿ, ತುಸು ದೂರದಲ್ಲಿ ನನ್ನೆದುರು ಬಂದು ನಿಂತಳು.

ನಾನೂ ಎದ್ದುನಿಂತೆ; ದೇವಕನ್ಯೆಯಂತಿದ್ದ ಅವಳನ್ನು ನಿಬ್ಬೆರಗಾಗಿ ದಿಟ್ಟಿಸುತ್ತ ನಿಂತಿದ್ದೆ. ಅವಳೂ ನನ್ನನ್ನು ಕ್ಷಣಕಾಲ ದಿಟ್ಟಿಸಿ ನೋಡಿದಳು.

" ನೀವು....ಮಾಲಿನಿ....ತಾನೆ ?"

" ಹೌದು. ನೀವು....ಯಾರೋ....?

" ನಾನು....ನೀವು ಒಂದು ಕಾಗದ ಬರೆದಿದ್ದಿರಿ....ಗುರುತಿಗಾಗಿ ಅದನ್ನು ತರುವಹಾಗೆ ಅದರಲ್ಲಿ ಬರೆದಿದ್ದೀರಿ. ಆ ಕಾಗದ ತಡವಾಗಿ ಕೈಸೇರಿತು. ಈ ಹೊತ್ತಿಗಿಂತ ಮುಂಚೆ ಬರಲು ಸಾಧ್ಯವಾಗಲಿಲ್ಲ...." ಎಂದು ಜೇಬಿನಲ್ಲಿ ಕಾಗದಕ್ಕಾಗಿ ತಡಕಾಡಿದೆ. ಅದು ಜೇಬಿನಲ್ಲಿರಲಿಲ್ಲ. ನಾಗಭೂಷಣ ನನಗೆ ಕಾಗದ ಕೊಡುವುದನ್ನು ಮರೆತಿದ್ದ: ನಾನಾದರೂ ಕೇಳಿ ಈಸಿಕೊಳ್ಳುವುದನ್ನು ಮರೆತಿದ್ದೆ. ನನ್ನ ಪೇಚಾಟವನ್ನು ಮಾಲಿನಿ ಅರಿತಳು.

" ಇರಲಿ ಬಿಡಿ. ನೀವು ಕವಿ ನಾಗಭೂಷಣರವರು, ಅಲ್ಲವೆ ?"

" ಹೌದು " ಎನ್ನುವಂತೆ ತಲೆಯಲ್ಲಾಡಿಸಿದೆ. ನನ್ನ ಎದೆ ಡವಡವ ಗುಟ್ಟುತ್ತಿತ್ತು. ನಾಗಭೂಷಣನ ಪಾತ್ರವನ್ನು ನಾನು ಆ ಕ್ಷಣದಿಂದ ನಟಿಸ

ಬೇಕಾಯಿತು. ಅಲ್ಲಿಯವರೆಗೆ ಈ ವಿಚಿತ್ರ ಸನ್ನಿವೇಶವನ್ನು ಮುಂಗಂಡಿದ್ದರೂ ಅದರ ಪ್ರತ್ಯಕ್ಷಾನುಭವದ ಅರಿವು ಪ್ರಾರಂಭವಾಗಿರಲಿಲ್ಲ. 'ನೀವು ನಾಗಭೂಷಣ ರಲ್ಲವೇ?' ಎಂದು ಮಾಲಿನಿ ಕೇಳಿ, ನಾನು 'ಹೌದು' ಎಂಬಂತೆ ತಲೆಯಲ್ಲಾಡಿಸಿ ಒಪ್ಪಿಕೊಂಡಾಗ ಆ ಅರಿವು ಹಠಾತ್ತನೆ ನನ್ನ ಎದೆ ಹೊಕ್ಕಿತು. ಎದೆ ಡವಡವಗುಟ್ಟಲು ಮೊದಲಾಯಿತು.

"ಇಲ್ಲಿ ಬನ್ನಿ, ಕುಳಿತುಕೊಳ್ಳಿ. ಒಂದು ನಿಮಿಷದಲ್ಲಿ ಬಂದುಬಿಡುತ್ತೇನೆ" ಎಂದು ಹೇಳಿ, ಮುಂಬಾಗಿಲನ್ನು ಮುಚ್ಚಿ ಅಗುಳಿ ಹಾಕಿ, ಅವಳು ಹೊರಟು ಹೋದಳು.

ನಾನು ಮಾಲಿನಿಯ ಚೆಲುವನ್ನು ಮನದಲ್ಲಿಯೇ ಪರಿಭಾವಿಸುತ್ತ ಕುಳಿತೆ.

ಮಾಲಿನಿ ದೇವಕನ್ಯೆಯ ಹಾಗಿದ್ದಳು ಎಂದು ಮೊದಲೇ ಹೇಳಿಬಿಟ್ಟಿದ್ದೇನೆ. ಆದರೆ, ದೇವಕನ್ಯೆಯರನ್ನು ನಾನು ನೋಡಿಲ್ಲ. ಅಪೂರ್ವ ಸುಂದರಿಯನ್ನು ದೇವಕನ್ಯೆಯೆಂದು ಹೇಳುವುದು ರೂಢಿ. ಆದ್ದರಿಂದ, ಮಾಲಿನಿ ಅಪೂರ್ವ ಸುಂದರಿ ಎಂದರೆ ಹೆಚ್ಚು ಹತ್ತಿರದ ಮಾತು. ಆ ಅಪೂರ್ವ ಸೌಂದರ್ಯವನ್ನು ಹೇಗೆ ವರ್ಣಿಸಲಿ? ವರ್ಣಿಸಲೇ ಬೇಕೆ? ಕಥೆಗೆ ಕಳೆ ಕಟ್ಟಬೇಕೆಂದು ವರ್ಣಿಸಬೇಕು, ಅಷ್ಟೆ. ಕಥೆ ಕಳೆಗುಂದಿದರೂ ಚಿಂತೆಯಿಲ್ಲ, ನಾನು ವರ್ಣಿಸಲಾರೆ. ಮೊದಲನೆಯದಾಗಿ, ಆ ಸಾಮರ್ಥ್ಯ ನನಗಿಲ್ಲ; ಎರಡನೆಯದಾಗಿ, ಅವಳ ಚೆಲುವು ಅವರ್ಣನೀಯ. ವರ್ಣಿಸ ಹೊರಟರೆ ವರ್ಣನೆ ಕೇವಲ ಚಹರೆ ಪಟ್ಟಿಯಾದೀತೆಂಬ ಭಯದಿಂದ ವರ್ಣಿಸುವ ಸಾಹಸಕ್ಕೆ ಕೈ ಹಾಕಲೊಲ್ಲೆ. 'ಚೆಲುವು ನೋಟಕನ ನೋಟದಲ್ಲಿ' ಎಂದು ಇಂಗ್ಲೀಷಿನಲ್ಲಿ ಹೇಳುವುದುಂಟು. ನನ್ನ ನೋಟಕ್ಕಂತೂ ಅವಳ ಚೆಲುವು ಕೇವಲ ಅವಳ ಅಂಗಾಂಗಗಳಿಗೆ ಸಂಬಂಧಪಟ್ಟುದಲ್ಲ, ಅವುಗಳ ಮೂಲಕ ಹೊರಹೊಮ್ಮಿದ ಒಂದು ದಿವ್ಯ ಪ್ರಭೆ ಎಂದು ಭಾಸವಾಯಿತು. ಆ ಪ್ರಭೆ ನನ್ನ ಹೃದಯವನ್ನು ಬೆಳಗಿತು, ಮನಸ್ಸನ್ನು ಯಾವುದೋ ಲೋಕಕ್ಕೆ ಕೊಂಡೊಯ್ದಿತು.

ಅವಳ ಚೆಲುವನ್ನು ನನ್ನ ಕಣ್ಣು ಕಂಡುವು, ಆದರೆ ಕಾಮಿಸಲಿಲ್ಲ; ಹೃದಯ ಅದರ ಪ್ರಭೆಯಲ್ಲಿ ಮಿಂದಿತು, ಅದನ್ನು ಬಯಸಲಿಲ್ಲ; ಮನಸ್ಸು ಅದಕ್ಕೆ ಮಣಿಯಿತು, ಆದರೆ ಮೋಹಗೊಳ್ಳಲಿಲ್ಲ. ಸ್ವಸ್ವರೂಪಕ್ಕೂ ಅವಳ ಸುಂದರ ಸವಿರೂಪಿಗೂ ಇದ್ದ ಅಪಾರ ಅಂತರದ ಅರಿವೇ ಈ ಸ್ಥಿತಿಗೆ ಮುಖ್ಯ

ಕಾರಣ. ನಾಚಿಕೆಯೇನು ? ಬಿಡಿಸಿ ಹೇಳಿಬಿಡುತ್ತೇನೆ. ನನ್ನ ರೂಪ ಅಷ್ಟಷ್ಟೆ. ಬಣ್ಣವಂತೂ ಕೇಳಲೇ ಬೇಡಿ. ಸಾಕ್ಷಾತ್ ಶ್ರೀ ಕೃಷ್ಣ ವಾಚಕ. ಜೊತೆಗೆ ಕುಬ್ಜಾವತಾರ! ಇಷ್ಟಾದರೂ ಕುರೂಪಿಯೇನಲ್ಲ; ಆದರೂ, ಯಾವ ತರುಣಿಯೂ ನನ್ನನ್ನು ಮೆಚ್ಚಿ ಕೈಹಿಡಿಯುವಂತಹನಲ್ಲ. ನನ್ನನ್ನು ಮದುವೆಯಾಗುವವಳು ವಿದ್ಯಾವಂತನೆಂದು ನನ್ನಲ್ಲಿ ತೃಪ್ತಿಗೊಂಡಿರಬೇಕು. ಸ್ವಸ್ವರೂಪಪ್ರಜ್ಞೆಯಿದ್ದುದು ನನ್ನ ವಿವೇಕವೆಂದು ನಾನು ಒಪ್ಪಿಕೊಳ್ಳಬೇಕು. ಮಾಲಿನಿಯಲ್ಲಿ ಮೋಹ ಗೊಳ್ಳದಂತೆ ತಡೆಹಿಡಿದದ್ದು ಈ ವಿವೇಕ. ನಾಗಭೂಷಣ ಘಾಟಿ ಎಂದು ಕೊಂಡೆ. ಅಪರಿಚಿತೆಯಾದ ಚೆಲುವೆಯನ್ನು ಭೇಟಿ ಮಾಡಲು ನನಗಿದ್ದ ಅರ್ಹತೆಗಳು ಇವೇ! ನನ್ನ ಮನಸ್ಸು ನೋಯಿಸದೆ ನಾಗಭೂಷಣ ನನ್ನನ್ನು ತನ್ನ ರಾಯಭಾರಿಯಾಗಿ ಆಯ್ದುಕೊಂಡ ಗುಟ್ಟು ಈಗ ನನಗೆ ಅರ್ಥವಾಯಿತು.

ಈ ಪರಿಭಾವನೆ ಮುಗಿದ ಮೇಲೆ ನನ್ನ ಕಣ್ಣು ಚಿತ್ರಪಟಗಳ ಸಾಲಿನ ಮೇಲೆ ಸುಳಿದಾಡಿತು. ಪಟಗಳ ನಡುವಣ ಎರಡು ದೊಡ್ಡ ಪ್ರಮಾಣದ ಭಾವಚಿತ್ರಗಳು ನನ್ನ ಗಮನವನ್ನು ಸೆಳೆದುವು. ಒಂದು ಮಧ್ಯವಯಸ್ಸನ್ನು ದಾಟಿದ್ದ ಪುರುಷನದು ; ಇನ್ನೊಂದು ಸುಮಾರು ೨೫-೩೦ ವಯಸ್ಸಿನ ಸುಂದರ ಸ್ತ್ರೀಯದು. ಚಿತ್ರದ ಪುರುಷನ ಶಿರಸ್ಸು ಜರಿಯ ಪೇಟದಿಂದ ಅಲಂಕೃತ ವಾಗಿತ್ತು ; ಹುರಿ ಮೀಸೆ ಮುಖಕ್ಕೆ ರಾಜಠೀವಿಯನ್ನು ಕೊಟ್ಟಿತ್ತು.

ಚಿತ್ರಾವಲೋಕನದಲ್ಲಿ ನನ್ನ ಮನಸ್ಸು ಮುಳುಗಿದ್ದಾಗಲೇ ಮಾಲಿನಿ ಒಂದು ತಟ್ಟೆಯಲ್ಲಿ ಬಿಸ್ಕತ್ತನ್ನೂ ಒಂದು ಲೋಟ ಓವಲ್‌ಟೈನನ್ನೂ ತಂದು ಮೇಜಿನ ಮೇಲಿಟ್ಟು, " ದಯವಿಟ್ಟು ತೆಗೆದುಕೊಳ್ಳಬೇಕು " ಎಂದು ಮೆಲುದನಿ ಯಲ್ಲಿ ಹೇಳಿದಳು.

ಅವಳ ಮೆಲುದನಿ ವೀಣಾ ಸ್ವರದಂತೆ ಇಂಪಾಗಿತ್ತು.

ಉಪಚಾರಕ್ಕೂ 'ಬೇಡ' ಎಂದು ಹೇಳದೆ ಉಪಾಹಾರವನ್ನು ಸ್ವೀಕರಿಸಿದೆ. ನಾಗಭೂಷಣನ ರಾಯಭಾರ ನಿರ್ವಹಣಕ್ಕೆ ಇಷ್ಟಾದರೂ ಪ್ರತಿಫಲ ನನಗೆ ಬೇಡವೇ?

ಉಪಾಹಾರ ಮುಗಿದ ಮೇಲೆ, " ನೀವು ನನ್ನ ಮೇಲೆ ಮರುಕ ತೋರಿ ಬಂದದ್ದು ಬಹಳ ಉಪಕಾರವಾಯಿತು " ಎಂದಳು ಮಾಲಿನಿ.

" ಇಷ್ಟೇ ಉಪಕಾರದಿಂದ ನೀವು ತೃಪ್ತಿಪಟ್ಟುಕೊಳ್ಳುವುದಾದರೆ ನನಗೆ ಸಂತೋಷ " ಎಂದೆ ನಾನು.

" ಹೆಚ್ಚಿನ ಉಪಕಾರವನ್ನು ನಾನು ನಿಮ್ಮಿಂದ ಬಯಸಿರುವುದು ನನ್ನ ಕಾಗದದಿಂದ ನಿಮಗೆ ಗೊತ್ತಾಗಿರಬೇಕು, ಅಲ್ಲವೇ ?"

ನವಯೌವನಪೂರ್ಣಳಾದ ವಿವಾಹಿತ ತರುಣಿ ಅಪರಿಚಿತ ತರುಣನೊಂದಿಗೆ ಇಷ್ಟು ನಿಸ್ಸಂಕೋಚದಿಂದ, ನಿರ್ಭಯದಿಂದ ವರ್ತಿಸಬೇಕಾದರೆ ಅವಳು ಸಿಲುಕಿಕೊಂಡಿದ್ದ ಸಮಸ್ಯೆ ವಿಷಮವಾದುದಿರಬೇಕೆಂದು ನನಗೆ ಖಚಿತವಾಯಿತು.

" ನನ್ನ ಕೈಲಾದ ಉಪಕಾರ ಮಾಡಲು ಸಿದ್ಧನಿದ್ದೇನೆ " ಎಂದು ಬಿಚ್ಚು ಮನಸ್ಸಿನಿಂದ ನುಡಿದು ಭಾವಚಿತ್ರಗಳ ಕಡೆ ಮತ್ತೆ ಕಣ್ಣು ಹರಿಯಿಸಿ, " ನಿಮ್ಮ ಯಜಮಾನರು ಮನೆಯಲ್ಲಿ ಇಲ್ಲ ಎಂದು ಕಾಣಿಸುತ್ತೆ " ಎಂದು ಸೇರಿಸಿದೆ.

" ಅವರು ಊರಿನಲ್ಲಿ ಇಲ್ಲ. ನಾಳೆ ಬರುವ ನಿರೀಕ್ಷೆ ಇದೆ. ಏನೋ ಕೆಲಸಕ್ಕಾಗಿ ಬೊಂಬಾಯಿಗೆ ಹೋಗಿದ್ದಾರೆ " ಎಂದು ಹೇಳಿ ತಲೆ ತಗ್ಗಿಸಿದಳು.

ನಾನು ಮತ್ತೆ ಭಾವಚಿತ್ರಗಳ ಕಡೆ ನೋಡುತ್ತ, " ನಿಮ್ಮ ಅತ್ತೆ ಮಾವ ಎಂದು ಕಾಣುತ್ತೆ " ಎಂದೆ.

" ಅಲ್ಲ. ನನ್ನ ಯಜಮಾನರು, ಅಕ್ಕ " – ಮಾಲಿನಿ ತಲೆ ತಗ್ಗಿಸಿಯೇ ಇದ್ದಳು. ಅವಳ ಕೆನ್ನೆಯ ಮೇಲೆ ಕಣ್ಣೀರ ಕೋಡಿ ಹರಿಯುತ್ತಿದ್ದುದು ನನ್ನ ಗಮನಕ್ಕೆ ಬಾರದೆ ಹೋಗಲಿಲ್ಲ. ಅಕ್ಕನ ನೆನಪಿನಿಂದ ದುಃಖ ಮರುಕೊಳಿಸಿಕೊಂಡಿರಬೇಕು ಎಂದು ಊಹಿಸಿದೆ. ತುಸ ಹೊತ್ತು ಇಬ್ಬರೂ ಮೌನವಾಗಿದ್ದೆವು.

" ಕ್ಷಮಿಸಿ, ನಿಂತುಕೊಳ್ಳಲಾರೆ " ಎಂದು ಮಾಲಿನಿ ನನ್ನ ಎದುರಿನ ಒಂದು ಕುರ್ಚಿಯ ಮೇಲೆ ಕುಳಿತಳು. ಪುನಃ ಒಂದೆರಡು ನಿಮಿಷ ಮೌನವಾಗಿದ್ದಳು. ದೀರ್ಘ ನಿಶ್ವಾಸೋಚ್ಛ್ವಾಸದಿಂದ ಅವಳ ತುಂಬು ಎದೆ ಉಬ್ಬಿ ಇಳಿಯುತ್ತಿತ್ತು. ಅವಳು, ಆ ಚೆಲುವೆ, ಏಕಾಂತದಲ್ಲಿ ನನ್ನೊಡನಿದ್ದ ತರುಣಿ, ದುಃಖಭರದಲ್ಲಿ ಮುಳುಗಿ ಕಂಬನಿ ಸುರಿಸದೆ ಮುಗುಳುನಗೆ ಬೀರಿ ಕಡೆಗಣ್ಣ ನೋಟವನ್ನು ನನ್ನ ಕಡೆಗೆ ಎಸೆದಿದ್ದರೆ, ನನ್ನಲ್ಲಿ ಖಂಡಿತವಾಗಿಯೂ ದುರ್ಭಾವನೆ ಮೂಡದಿರುತ್ತಿರಲಿಲ್ಲ. ಅವಳ ಹೃದಯದಲ್ಲಾದರೂ ಯಾವುದೂ ದುರ್ಭಾವನೆ

ಇಲ್ಲವೆಂದು ನನಗೆ ಸ್ಪಷ್ಟವಾಯಿತು. ನನ್ನ ನೋಟದಲ್ಲಿ ಒಡಮೂಡಿದ್ದ ಮರುಕ ಆವಳ ಗಮನಕ್ಕೂ ಬಂದಿರಬೇಕು. ನನ್ನ ರೂಪವಂತೂ ಅವಳ ಮನಸ್ಸನ್ನು ಯಾವ ಬಗೆಯಲ್ಲೂ ವಿಕಾರಗೊಳಿಸುವಂತಿರಲಿಲ್ಲವೆಂದು ಮತ್ತೆ ಒತ್ತಿ ಹೇಳಬೇಕಾಗಿಯೇ ಇಲ್ಲ. ಕೇವಲ ನನ್ನ ಮೌನದ ಸಹಾನುಭೂತಿ ಯಿಂದ ಪ್ರೋತ್ಸಾಹಗೊಂಡು, ಕಂಬನಿಯೊರಸಿಕೊಂಡು, ಉಸಿರನ್ನೂ ಮನ ಸ್ಸನ್ನೂ ಹತೋಟಿಗೆ ತಂದುಕೊಳ್ಳಲು ಒಮ್ಮೆ ನೀಳವಾಗಿ ಉಸಿರಾಡಿ, ಮನ ಬಿಚ್ಚಿ ಮಾತನಾಡತೊಡಗಿದಳು ಮಾಲಿನಿ.

"ನನ್ನ ಪಾಲಿಗೆ ನಿಮ್ಮ ಮರುಕ ಇದ್ದೇ ಇದೆ ಎಂದು ನನಗೆ ಸಂಪೂರ್ಣ ವಾಗಿ ನಂಬಿಕೆ ಇದೆ. ನನಗೆ ಬೇಕಾದದ್ದು ಮರುಕವಲ್ಲ; ನಿಮ್ಮ....ನಿಮ್ಮ.... ಸಹಾಯ."

ನಾನು ಮೌನವಾಗಿದ್ದೆ. "ಏನು ಸಹಾಯ ಬೇಕು?" ಎಂಬ ಪ್ರಶ್ನೆ ನನ್ನ ಮೌನದಲ್ಲಿಯೇ ಅಡಕವಾಗಿತ್ತು.

"ಸಹಾಯ ನೀಡುವುದಾಗಿ ಭರವಸೆ ಕೊಡುತ್ತೀರ?"

"ಆಗಲಿ. ನಿಮ್ಮ ಕಷ್ಟವೇನು ಮೊದಲು ತಿಳಿಸಿ."

ಮಾಲಿನಿ ತನ್ನ ದುಃಖದ ಕಥೆಯನ್ನು ನನ್ನಲ್ಲಿ ತೋಡಿಕೊಂಡಳು. ಅದನ್ನು ನನ್ನ ಮಾತಿನಲ್ಲಿಯೇ ತಿಳಿಸುತ್ತೇನೆ.

## ೩

ಮಾಲಿನಿಯ ಪತಿಯ ಹೆಸರು ರಾಜಾರಾಯರು. (ಮಾಲಿನಿ ಅವರ ಹೆಸರನ್ನು ಹೇಳಲಿಲ್ಲ; ಆಮೇಲೆ ನನಗೆ ತಿಳಿದು ಬಂದಿತು.) ಆಗರ್ಭ ಶ್ರೀಮಂತರು. ತಂದೆ ಗಳಿಸಿದ ಅಪಾರ ಆಸ್ತಿಯನ್ನು ಉಳಿಸಿ ಬೆಳೆಸಿಕೊಳ್ಳುವುದೇ ಅವರ ಮುಖ್ಯ ಉದ್ಯೋಗ. ಭಾವಚಿತ್ರದಲ್ಲಿ ಅಷ್ಟು ಕುರೂಪಿಗಳಾಗಿ ಕಂಡುಬರ ದಿದ್ದರೂ ಪ್ರತ್ಯಕ್ಷವಾಗಿ ನೋಡಿದರೆ ಯಾರೂ ಅವರನ್ನು ರೂಪವಂತರ ಪಟ್ಟಿ ಯಲ್ಲಿ ಸೇರಿಸಲಾಗುತ್ತಿರಲಿಲ್ಲ. ಸಿರಿವಂತರಿಗೆ ಸುಂದರಿಯೊಬ್ಬಳು ಪತ್ನಿಯಾಗಿ ದೊರಕುವುದು ಅಸಾಧ್ಯವೂ ಅಲ್ಲ ಅಸಾಧಾರಣವೂ ಅಲ್ಲ. ಆದರೂ ರಾಜಾ ರಾಯರ ಮೊದಲನೆಯ ಹೆಂಡತಿ ಅವರಿಗೆ ಅನುರೂಪಳಾಗಿಯೇ ಇದ್ದಳಂತೆ.

ತಾರುಣ್ಯದಲ್ಲಿ ತಂದೆ ತಾಯಿಗಳ ಬಲಾತ್ಕಾರಕ್ಕೆ ಸಾಮಾನ್ಯ ತರುಣಿಯನ್ನೇ ಮದುವೆಯಾಗಿ ಅವಳೊಂದಿಗೆಯೇ ಕೆಲವು ವರ್ಷ ಒಂದು ರೀತಿಯಲ್ಲಿ ಸುಖ ವಾಗಿಯೇ ಬಾಳು ನೂಕಿದರು. ಅವರ ದುರದೃಷ್ಟಕ್ಕೆ ತಂದೆ ತಾಯಿ ತೀರಿ ಕೊಂಡ ಒಂದೆರಡು ವರ್ಷಗಳಲ್ಲಿ, ಸಂತಾನಭಾಗ್ಯವನ್ನು ನೀಡದೆಯೆ ಅವಳು ಕಣ್ಣು ಮುಚ್ಚಿದಳು. ಹೆಂಡತಿ ತೀರಿದ ತರುಣದಲ್ಲಿ ಪ್ರಾಯದ ಹೊಸಿಲನ್ನು ಇನ್ನೂ ದಾಟದಿದ್ದ ರಾಜಾರಾಯ ಕೊರಗಿನಲ್ಲಿ ಮುಳುಗಿದ್ದರೂ ಕಾಲಕ್ರಮದಲ್ಲಿ ಕೊರಗು ನಂದಿದ ಮೇಲೆ, ಸಹಜವಾಗಿಯೇ ಸ್ತ್ರೀಯ ಸಹವಾಸವನ್ನು ಬಯಸ ತೊಡಗಿದನು. ಮೊದಲಿನಿಂದಲೂ ಧನವನ್ನು ಅಪವ್ಯಯ ಮಾಡಿದವನಲ್ಲ ಅವನು; ಐಶ್ವರ್ಯವನ್ನು ವರ್ಧಿಸಿಕೊಳ್ಳಬೇಕೆಂಬುದೇ ಅವನ ಪ್ರವೃತ್ತಿ. ಅಲ್ಲದೆ ಅವನು ಆತ್ಮಗೌರವ ಪ್ರಿಯ, ಜನಾಪವಾದ ಭೀತ. ಮನಸ್ಸು ಕೆಲವೊಮ್ಮೆ ಅತ್ತ ಸೆಳೆಯುತ್ತಿದ್ದರೂ, ಅವನು ದುರ್ಮಾರ್ಗಪ್ರವೃತ್ತನಾಗಲಿಲ್ಲ. ಮತ್ತೆ ಮದುವೆಯಾಗಬಯಸಿದನು. ಸ್ಥೂಲಕಾಯನೂ ಕೃಷ್ಣವರ್ಣನೂ ವಿಧುರನೂ ಆದ ಅವನಿಗೆ ಸಮಾನಸ್ಕಂಧರಾದ ಶ್ರೀಮಂತರು ಯಾರೂ ಹೆಣ್ಣು ಕೊಡಲು ಮುಂದೆ ಬರಲಿಲ್ಲ. ಮಧ್ಯಸ್ಥಿಕೆಗಾರರ ಪ್ರಯತ್ನದಿಂದ ಬಡ ಶಾಲಾ ಉಪಾಧ್ಯಾಯನೊಬ್ಬನು ತನ್ನ ಇಬ್ಬರು ಹೆಣ್ಣು ಮಕ್ಕಳಲ್ಲಿ ಹಿರಿಯವಳಾದ ಕುಮುದಿನಿಯನ್ನು ರಾಜಾರಾಯನಿಗೆ ಕೊಡಲೊಪ್ಪಿದನು.

ಆ ಶಾಲಾ ಉಪಾಧ್ಯಾಯ ಆಧುನಿಕ ಭಾವನೆಗಳುಳ್ಳವನು. ಸಂಸಾರದ ಸುಳಿಯಲ್ಲಿ ಸಿಲುಕಿ ಪೇಚಾಡುತ್ತಿದ್ದವನು. ನಾಲ್ಕು ಗಂಡುಮಕ್ಕಳ ವಿದ್ಯಾ ಭ್ಯಾಸದ ಹೊಣೆ ಬೇರೆ ಅವನ ಹೆಗಲಮೇಲೆ ಬಿದ್ದಿತ್ತು. ಕುಮುದಿನಿ ಹೈಸ್ಕೂಲು ತರಗತಿಯಲ್ಲಿ ಓದುತ್ತಿದ್ದಳು. ಸುಲಭನಾದ ವರನು ದೊರೆಯದೆ ಹೋದರೆ ಹೆಣ್ಣು ಮಕ್ಕಳಿಗೆ ಕಾಲೇಜು ವಿದ್ಯಾಭ್ಯಾಸ ಮಾಡಿಸಿ, ಅವರ ಪಾಡಿಗೆ ಅವರನ್ನು ಬಿಡುವುದೆಂದು ಅವನ ಮನಸ್ಸು. ಈ ಮನಸ್ಸ್ಥಿತಿಯಲ್ಲಿದ್ದ ಅವನಿಗೆ ರಾಜಾ ರಾಯನ ಕನ್ಯಾಪೇಕ್ಷೆ ಮಧ್ಯಸ್ಥಿಕೆಗಾರರಿಂದ ತಿಳಿಯಬಂದಿತು. ಕನ್ಯಾಪಿತೃವಿನ ಮದುವೆಯ ವೆಚ್ಚವೆಲ್ಲವನ್ನೂ ರಾಜಾರಾಯನೇ ವಹಿಸಿಕೊಳ್ಳಲು ಸಿದ್ಧನಾಗಿ ದ್ದನು. ಬಡ ಕನ್ಯಾಪಿತೃವಿಗೆ ಇದಕ್ಕಿಂತಲೂ ಬೇರೆಯ ಪ್ರಲೋಭನವಿನ್ನೇನು ಬೇಕು? ಕುಮುದಿನಿಗೂ ಅವಳ ತಾಯಿಗೂ ಇಷ್ಟವಿಲ್ಲದಿದ್ದರೂ ಮದುವೆ ನಡೆದೇ ಹೋಯಿತು.

ಕುಮುದಿನಿಗೆ ಆಗ ಇನ್ನೂ ಎಸ್. ಎಸ್. ಎಲ್. ಸಿ. ಪರೀಕ್ಷೆಯಾಗಿರ ಲಿಲ್ಲ. ಪರೀಕ್ಷೆಯ ಮುನ್ನವೇ ಗಂಡನ ಮನೆಗೆ ಬರಬೇಕಾಯಿತು. ಗಂಡನ ಮನೆಗೆ ಬಂದ ಮೇಲೆ ತಾನು ಮದುವೆಯಾಗದೆ ಉಳಿದಿದ್ದರೆ ಲೇಸಾಗು ತ್ತಿತ್ತೆಂದು ಅವಳಿಗೆ ತೋರಿತು. ಹೇಗೋ ಮನಸ್ಸನ್ನು ಸಮಾಧಾನ ಮಾಡಿ ಕೊಂಡು ಗಂಡನೊಡನೆ ಸಂಸಾರ ಪಥದಲ್ಲ ನಡೆಯತೊಡಗಿದಳು. ಮನಸ್ಸನ್ನು ದಾಂಪತ್ಯ ಜೀವನಕ್ಕೆ ಒಗ್ಗಿಕೊಂಡಳೇ ಹೊರತು ಮನಸ್ಸು ಮುದಗೊಳ್ಳಲಿಲ್ಲ, ಗಂಡನ ಮನಸ್ಸಿನೊಂದಿಗೆ ಬೆರೆಯಲಿಲ್ಲ. ಆದರೂ ಯಾವ ಸುಖಭೋಗ ಭಾಗ್ಯಗಳಿಗೂ ಕೊರತೆಯಿಲ್ಲದ್ದರಿಂದಲೂ ಗಂಡ ತನ್ನನ್ನು ಪ್ರೀತಿ ಗೌರವಗಳಿಂದ ನಡಸಿಕೊಳ್ಳುತ್ತಿದ್ದ ರೀತಿಯಿಂದಲೂ ಅವಳಿಗೆ ಗಂಡನಲ್ಲಿ ಅಪಾರ ಗೌರವ ವಿದ್ದಿತು. ಆದರೇನು? ಹರ್ಷವಿಲ್ಲ, ಗೆಲವಿಲ್ಲ. ತುಸ ಉಲ್ಲಾಸವನ್ನು ಪಡೆಯುವ ಉದ್ದೇಶದಿಂದ, ಕುಮುದಿನಿ ಗಂಡನಿಗೆ ತಿಳಿಸಿ ತಂಗಿ ಮಾಲಿನಿ ಯನ್ನು ಕರಸಿಕೊಂಡು ಜೊತೆಯಲ್ಲಿಟ್ಟುಕೊಂಡಳು.

ಮಾಲಿನಿ ತನ್ನ ಅಕ್ಕನ ಜೊತೆಯಲ್ಲಿರಲು ಬಂದಾಗ ಅವಳಿಗೆ ಹದಿಮೂರು ವರ್ಷ; ಆಗ ತಾನೆ ಲೋವರ್ ಸೆಕಂಡರಿ ಪರೀಕ್ಷೆಯಲ್ಲಿ ತೇರ್ಗಡೆಯಾಗಿದ್ದಳು.

ರತಿಯಂತಹ ಹೆಂಡತಿ ತನಗಾದಳೆಂದು ರಾಜಾರಾಯ ಮೊದಲು ಹಿಗ್ಗಿ ಹೋಗಿದ್ದನು; ಆದರೆ ಮೈಯನ್ನು ಮಾತ್ರ ಕೊಟ್ಟು ಮನಸ್ಸನ್ನು ಕೊಡದಿದ್ದ ಹೆಂಡತಿಯ ವರ್ತನೆಯ ರಹಸ್ಯವನ್ನು ಭೇದಿಸಲಾರದವನಾಗಿ ಒಳಗೊಳಗೇ ಕೊರಗುತ್ತಿದ್ದನು. ಮಾಲಿನಿ ಮನೆಗೆ ಬಂದದ್ದು ಗಂಡ ಹೆಂಡಿರಿಬ್ಬರ ಬಾಳಿಗೂ ತಾತ್ಕಾಲಿಕವಾಗಿಯಾದರೂ ಒಂದು ಬೆಳಕು ಬಂದಂತಾಗಿತ್ತು. ರಾಜಾರಾಯನು ತನ್ನ ಹೆಂಡತಿಯಿಂದ ಪಡೆಯಬೇಕಾಗಿದ್ದು ಪಡೆಯಲಾಗದಿದ್ದ ಹರ್ಷೋ ಲ್ಲಾಸಗಳನ್ನು ತನ್ನ ನಾದಿನಿಯಿಂದ ಪಡೆಯದೊಡಗಿದನು. ತನ್ನ ತಂಗಿ ಅಥವಾ ಮಗಳು ಆಗಿದ್ದರೆ ಹೇಗೋ ಹಾಗೆ ಮಾಲಿನಿಯನ್ನು ಮುದ್ದಿನಿಂದ ಲಾಲಿಸಿ ಪಾಲಿಸತೊಡಗಿದ್ದನು. ಅವಳನ್ನು ಬಗೆ ಬಗೆಯಲ್ಲಿ ಸುಖಪಡಿಸಬೇಕೆಂದು ಗಂಡನೇ ಉತ್ಸುಕನಾಗಿ ಮುಂದುವರಿಯುತ್ತಿರುವಲ್ಲಿ ಇನ್ನು ಕುಮುದಿನಿಯನ್ನು ಕೇಳಬೇಕೇ? ತಂಗಿಯನ್ನು ಸುಖದ ಸುಪ್ಪತ್ತಿಗೆಯ ಮೇಲೆಯೇ ಮಲಗಿಸಿದಳು. ಬಡ ಸಂಸಾರದಲ್ಲಿ ಒಣಕಲು ಸಣಕಲಾಗಿದ್ದ ಮಾಲಿನಿ ಬರುಬರುತ್ತ ಮೈತುಂಬಿ ಕೊಂಡು ಬೆಳೆದು ಚೆಲುವಿನ ಚಿಲುಮೆಯಾದಳು. ರಾಜಾರಾಯನ ಸಿನಿಮಾ,

ನಾಟಕ, ಸಂಗೀತ – ಮೊದಲಾದ ಮನರಂಜನೆಯ ಕಾರ್ಯಕ್ರಮಗಳಲ್ಲೆಲ್ಲಾ ಮಾಲಿನಿ ನಿತ್ಯದ ಸಂಗಾತಿಯಾದಳು. ಕುಮುದಿನಿಯೂ ಒಮ್ಮೊಮ್ಮೆ ಜೊತೆಗೂಡುವಳು; ಆದರೆ ಬಹುಮಟ್ಟಿಗೆ ಏನಾದರೂ ನೆಪ ಹೇಳಿ ಮನೆಯಲ್ಲಿ ಉಳಿಯುತ್ತಿದ್ದುದೇ ಹೆಚ್ಚು. ರಾಜಾರಾಯ ಒಮ್ಮೊಮ್ಮೆ ಯಾವ ದುರ್ಭಾವನೆಯೂ ಇಲ್ಲದೆ ಮಾಲಿನಿಯನ್ನು ಅಪ್ಪಿ ಮುದ್ದಿಡುವನು. ಭಾವನ ಮುದ್ದಾಟಕ್ಕೆ ಅಸಮ್ಮತಿ ಅಸಮಾಧಾನ ಇಲ್ಲದಿದ್ದರೂ ಮಾಲಿನಿ ನಾಚಿಕೆಯನ್ನು ನಟಿಸಿ, "ಥೂ ಬಿಡಿ ಭಾವ" ಎಂದು ತೋಳತಕ್ಕೆಯನ್ನು ಕೊಡಹಿಕೊಂಡು ಹೋಗಿ, "ಅಕ್ಕನಿಗೆ ಹೇಳುತ್ತೇನೆ" ಎನ್ನುವಳು. "ಅಕ್ಕನಿಗಲ್ಲದಿದ್ದರೆ ನಿನ್ನ ಗಂಡನಿಗೆ ಹೇಳು" ಎನ್ನುವನು ರಾಜಾರಾಯ. ಹೀಗೆ ಎರಡು ಮೂರು ವರ್ಷ ಕಳೆಯಿತು. ಈ ಕಾಲದಲ್ಲಿ ಮಾಲಿನಿಯ ತಂದೆ ರಜದಲ್ಲಿ ಮಗಳನ್ನು ಕಳಿಸಿಕೊಡಿ ಎಂದು ಬೇಡಿ ಪತ್ರ ಬರೆದರೆ, "ನೀವೇ ರಜದಲ್ಲಿ ಬಂದು ಇಲ್ಲಿಯೇ ಇದ್ದುಕೊಂಡು ನಿಮ್ಮ ಇಬ್ಬರು ಹೆಣ್ಣುಮಕ್ಕಳನ್ನೂ ನೋಡಿಕೊಂಡು ಹೋಗಿ ಉಪಕಾರ ಮಾಡಬೇಕು" ಎಂದು ರಾಜಾರಾಯ ಉತ್ತರ ಬರೆದುಬಿಡುತ್ತಿದ್ದನು. ಶ್ರೀಮಂತ ಅಳಿಯನ ಮಾತು ಮೀರಲಾರದೆ, ಮಾಲಿನಿಯ ತಂದೆ ತನ್ನ ಹೆಂಡತಿ ಮಕ್ಕಳೊಂದಿಗೆ ಅಳಿಯನ ಮನೆಯಲ್ಲಿಯೇ ಬಂದು ಇದ್ದು, ತನ್ನ ಇಬ್ಬರೂ ಹೆಣ್ಣುಮಕ್ಕಳು ಅಷ್ಟೊಂದು ಸುಖವಾಗಿದ್ದುದನ್ನು ಕಂಡು ಹಿಗ್ಗಿನಿಂದ ಅಳಿಯನ ಉಡುಗೊರೆಗಳೊಂದಿಗೆ ಹಿಂದಿರುಗುತ್ತಿದ್ದನು.

ಮಾಲಿನಿಗೆ ಎಸ್. ಎಸ್. ಎಲ್. ಸಿ. ಪರೀಕ್ಷೆಯಲ್ಲಿ ತೇರ್ಗಡೆಯಾಯಿತು. ಮಗಳಿಗೆ ಮದುವೆ ಮಾಡಬೇಕೆಂಬ ಅಪೇಕ್ಷೆಯುಂಟಾಗಿ ಮಾಲಿನಿಯ ತಂದೆ ವರಾನ್ವೇಷಣದ ಭಾರವನ್ನು ಅಳಿಯನಿಗೇ ವಹಿಸಿದರು. ರಾಜಾರಾಯನು ಮಾಲಿನಿಯ ಮದುವೆಯ ಬಗ್ಗೆ ಯೋಚನೆ ಮಾಡಬೇಕಾಗಿಲ್ಲವೆಂದೂ, ಅವಳು ಇಂಟರ್ ಮೀಡಿಯಟ್ ಪರೀಕ್ಷೆ ಮುಗಿಸುವವರೆಗೂ ಮದುವೆಯ ಮಾತೇ ಬೇಕಿಲ್ಲವೆಂದೂ ಅಧಿಕಾರ ವಾಣಿಯಿಂದ ತಿಳಿಸಿಬಿಟ್ಟನು. ರಾಜಾರಾಯನ ಮಾತಿಗೆ ಎಲ್ಲರೂ ಹರ್ಷದಿಂದಲೇ ಒಪ್ಪಿಕೊಂಡರು.

ಮಾಲಿನಿ ಕಾಲೇಜಿಗೆ ಸೇರಿದಳು. ಕಾಲೇಜಿನ ವಿದ್ಯಾಭ್ಯಾಸ ಅವಳ ಮನಸ್ಸನ್ನು ಅರಳಿಸತೊಡಗಿತು; ಹೃದಯವನ್ನು 'ಕಾವ್ಯ ಪ್ರಪಂಚವಾವರಿಸಿ, ಕಾವ್ಯಮಯ ಕಮನೀಯ ಭಾವನೆಗಳೇ ಅದರಲ್ಲಿ ಹುದುಗಿ ಹೊಮ್ಮಿ ಹಿಗ್ಗಿಸ

ತೊಡಗಿದುವು. ಆಧುನಿಕ ತರುಣಿಗೆ ಒಪ್ಪಾಗುವ ವೇಷಭೂಷಣಗಳು ಮಾಲಿನಿಯ ಚೆಲುವಿಗೆ ಮೆರುಗು ಕೊಟ್ಟವು. ಒಡನಾಡಿಗಳಿಂದ ಒಯ್ಯಾರ, ಬೆಡಗು ಬಿನ್ನಾಣಗಳನ್ನು ಕಲಿತಳು ; ಕಲಿತಳೇನು, ತಾವಾಗಿ ಬಂದುವು. ಇವಳನ್ನು ಕಂಡ ಓದಿದ ತರುಣರೆಲ್ಲರ ಹೃದಯದ ಬಯಕೆಯ ಬಿಂಬವಾದಳು. ಮಾಲಿನಿಗೋಸ್ಕರವಾಗಿಯೇ ರಾಜಾರಾಯನು ಮನೆಗೆ ಹಲವಾರು ಮಾಸಪತ್ರಿಕೆಗಳನ್ನೂ ಕನ್ನಡ ಕಾದಂಬರಿಗಳನ್ನೂ ಕೊಂಡು ತರತೊಡಗಿದನು. ತರುಣ ಸಾಹಿತಿ ನಾಗಭೂಷಣನ ಕವಿತೆ ಕಥೆಗಳು ಮಾಲಿನಿಯ ಮನಸ್ಸನ್ನು ಸೆರೆಹಿಡಿದವು. ಆಗ, ನಾಗಭೂಷಣನನ್ನು ಕಾಣಬೇಕೆಂಬ ಬಯಕೆಯೇನೂ ಅವಳಿಗೆ ಇರಲಿಲ್ಲ. ಆದರೂ, ನಾಗಭೂಷಣನಂತಹ ಕವಿಯಲ್ಲದಿದ್ದರೂ ಕಾವ್ಯಗಂಗೆಯಲ್ಲಿ ಮಿಂದ ವಿದ್ಯಾವಂತ ತರುಣನನ್ನು ಕೈಹಿಡಿಯಬೇಕೆಂಬ ಹಂಬಲು ಅವಳ ಹೃದಯದಲ್ಲಿ ಮೂಡಿತು. ಕಂಡ ಸುಂದರ ವಿದ್ಯಾರ್ಥಿಗಳೆಲ್ಲ ಮಾಲಿನಿಯ ಕನಸಿನಲ್ಲಿ ಅವಳ ಕೊರಳಿಗೆ ಮಾಲೆಸೂಡಲು ಕೈಚಾಚಿ ನಿಂತ ಕನ್ಯಾರ್ಥಿಗಳಾದರು. ತಾನು ಕೈಹಿಡಿಯುವ ವರ ಬಡವನಾದರೂ ಚಿಂತೆಯಿಲ್ಲ–ವಿದ್ಯಾವಂತನಾದ ಸುಂದರ ತರುಣನಾಗಿರಬೇಕು; ಯಾವ ಜಾತಿಯವನಾದರೂ ಚಿಂತೆಯಿಲ್ಲ : ಇದು ಕನ್ಯೆ ಮಾಲಿನಿಯ ಸವಿಗನಸಾಯಿತು. ಕನಸು ನನಸಾಗುವ ಸುದಿನವನ್ನು ಎದುರು ನೋಡುತ್ತ, ಮಾಲಿನಿ ಸೀನಿಯರ್ ಇಂಟರ್‌ಮೀಡಿಯಟ್ ಪರೀಕ್ಷೆಗೆ ಕಟ್ಟಿದಳು. ಈ ಕಾಲದಲ್ಲಿ, ಬೆಳೆದ ಮಾಲಿನಿ ಭಾವನ ಮುದ್ದಾಟಕ್ಕೆ ದೂರವಾಗಿದ್ದಳು. ರಾಜಾರಾಯನಾದರೂ ಪರಿಸ್ಥಿತಿಯನ್ನು ಲೆಕ್ಕಿಸದಷ್ಟು ಮೂಢನಾಗಿರಲಿಲ್ಲ, ಆದರೂ, ಭಾವ ನಾದಿನಿಯರ ಸರಸಸಲ್ಲಾಪಕ್ಕೆ ಯಾವ ಅಡ್ಡಿಯೂ ಇರಲಿಲ್ಲ ; ಅವರ ಮಧುರ ಬಾಂಧವ್ಯಕ್ಕೆ ಚ್ಯುತಿ ಇರಲಿಲ್ಲ.

ಕುಮುದಿನಿ ತನ್ನ ಅಸುಖವನ್ನು ಸ್ವಲ್ಪ ಮಟ್ಟಿಗೆ ಮರೆಯುವ ಕಾಲವೂ ಬಂದಿತು. ಅವಳು ಗರ್ಭಿಣಿಯಾಗಿ ಗಂಡುಮಗುವನ್ನು ಹಡೆದಿದ್ದಳು. ಮಾಲಿನಿಯೂ ಇಂಟರ್‌ಮೀಡಿಯಟ್ ಪರೀಕ್ಷೆಯಲ್ಲಿ ಮೊದಲನೆಯ ದರ್ಜೆಯಲ್ಲಿ ತೇರ್ಗಡೆಯಾದಳು. ಅವಳ ತಾಯಿತಂದೆಗಳ ಹಾಗೂ ರಾಜಾರಾಯನ ಸುಖಸಂತೋಷಗಳಿಗೆ ಪಾರವಿಲ್ಲವಾಯಿತು. ಆದರೆ ಈ ಸಂತೋಷ ಚಿರಕಾಲವಿರಲಿಲ್ಲ. ಕುಮುದಿನಿ ಬಾಣಂತಿರೋಗಕ್ಕೆ ತುತ್ತಾಗಿ, ಮೂರು ತಿಂಗಳ ತೊಟ್ಟಿಲಕೂಸನ್ನು ಬಿಟ್ಟು ಕಣ್ಣುಮುಚ್ಚಿದಳು,

ಆಗ ಶಾಲೆ ಕಾಲೇಜುಗಳಿಗೆ ಬೇಸಗೆಯ ರಜ. ಮಾಲಿನಿಯ ತಾಯಿ ತಂದೆಗಳೂ ಕೂಸಿನ ಆರೈಕೆಗೆ ಬಂದು ಅಳಿಯನ ಮನೆಯಲ್ಲಿಯೇ ಇದ್ದರು. ಆದರೆ ಅವರು ಎಷ್ಟು ದಿನ ನಿಲ್ಲುವುದಕ್ಕಾಗುತ್ತದೆ ? ಈಗ ಮಾಲಿನಿಯನ್ನೂ ಜೊತೆಯಲ್ಲಿ ಕರೆದುಕೊಂಡು ಹೋಗಬೇಕೆಂಬ ಆಲೋಚನೆ ಬಂದಿತು. ಅಕ್ಕನಿದ್ದಾಗ ಮಾಲಿನಿ ಭಾವನ ಮನೆಯಲ್ಲಿರಲು ಯಾವ ಆಕ್ಷೇಪಣೆಯೂ ಇರಲಿಲ್ಲ. ಅಕ್ಕನಿಲ್ಲದ ಭಾವನೊಂದಿಗೆ ಮದುವೆಗೆ ನೆರೆದ ಮಾಲಿನಿ ನಿಲ್ಲುವುದು ಅವಳ ತಾಯಿ ತಂದೆಗಳಿಗೆ ಸರಿಕಾಣಲಿಲ್ಲ. ಮಾಲಿನಿಯೂ ಹೊರಟು ಹೋದರೆ ಮಗುವನ್ನು ಪ್ರೀತಿಯಿಂದ ಸಲಹುವವರಾರು ? ಸಂಬಳದ ದಾದಿಯನ್ನು ನೇಮಿಸಿಕೊಳ್ಳಬೇಕು. ಇಲ್ಲವೆ, ಮಗುವನ್ನು ಅದರ ಅಜ್ಜಿಯ ರಕ್ಷಣೆಗೆ ವಹಿಸಬೇಕು. ಇದು ರಾಜರಾಯನಿಗೆ ಸಹ್ಯವೆನಿಸಲಿಲ್ಲ. ಇದುವರೆಗೆ ಹೆಂಡತಿ ನಾದಿನಿ ಇಬ್ಬರೇ ಇದ್ದರೂ ಕೂಡ ತುಂಬಿದಂತಿದ್ದ ಮನೆಯಲ್ಲಿ ಒಂಟಿ ಬಾಳನ್ನು ನೂಕುವುದು ಅವನಿಗೆ ಘೋರವಾಗಿ ಕಂಡಿತು. ಇದಕ್ಕೆ ಒಂದೇ ಪರಿಹಾರ ಮರಳಿ ಮದುವೆಯಾಗುವುದು. ಆ ಪಕ್ಷದಲ್ಲಿ, ಮಾಲಿನಿಯನ್ನೇ ಏಕೆ ಮದುವೆಯಾಗಬಾರದು ? ಬಹು ಒಳ್ಳೆಯ ಆಲೋಚನೆ. ಎಲ್ಲ ದೃಷ್ಟಿ ಗಳಿಂದಲೂ ಸಮಸ್ಯೆ ಪರಿಹಾರವಾದಂತಾಗುವುದು. ಅಲ್ಲದೆ, ಮಾಲಿನಿಯ ಮದುವೆಯ ಹೊಣೆಯನ್ನು ಕುಮುದಿನಿ ಬದುಕಿದ್ದಾಗ ತಾನೇ ವಹಿಸಿಕೊಂಡಿರ ಲಿಲ್ಲವೆ ? ಅವಳ ವಿದ್ಯಾಭ್ಯಾಸಕ್ಕೆ ತಾನು ಎಷ್ಟು ವೆಚ್ಚಮಾಡಿಲ್ಲ ? ಇದರಿಂದ ಮಾಲಿನಿಯ ವಿಷಯದಲ್ಲಿ ತನ್ನ ಕರ್ತವ್ಯದೊಂದಿಗೆ ಒಂದುಬಗೆಯ ಅಧಿಕಾರವೂ ಪ್ರಾಪ್ತವಾಗಿದೆಯಲ್ಲವೆ ? ಕುಮುದಿನಿಯ ಸಾವಿನೊಂದಿಗೆ ಒಂದು ವಿಧದಲ್ಲಿ ಕರ್ತವ್ಯವೇನೋ ಕೊನೆಗಂಡಿದೆ. ಹೆಂಡತಿಯೇ ಸತ್ತ ಮೇಲೆ ಎಲ್ಲಿಯ ನಾದಿನಿ ? ಮಾಲಿನಿಗೆ ಹಾಗೂ ಅವಳ ತಂದೆಗೆ ತಾನು ಮಾಡಿರುವ ಉಪಕಾರಕ್ಕೆ ಪ್ರತಿಯಾಗಿ ಅವಳನ್ನು ತಾನೇ ಮದುವೆಯಾದರೆ, ತಾನು ಹಿಂದೆ ಕೊಟ್ಟಿದ್ದ ವಚನವನ್ನೂ ನಡಸಿದಂತಾಗುವುದು ; ತನ್ನ ಸುಖವೂ ಸಾಧನೆಯಾಗುವುದು ; ಎಳೆಯ ಮಗುವಿಗೂ ಮಾಲಿನಿಯೇ ತಾಯಾಗುವಳು ; ಅವಳ ತಂದೆಗೂ ತನ್ನಿಂದ ಹೆಚ್ಚಿನ ಉಪಕಾರವಾಗುವುದು. ಮಾಲಿನಿಯ ಸುಖವೋ ? ವಿದ್ಯಾ ವತಿಯೂ ಸುಸಂಸ್ಕೃತಳೂ ಆದ ಆ ತರುಣಿಯ ಹೃದಯದ ವಿಚಾರ ಸೂಕ್ಷ್ಮತೆ

ಅವನಿಗಿರಲಿಲ್ಲ. ಅವನ ವಿಚಾರಧಾರೆ ಬಹುಮಟ್ಟಿಗೆ ಸ್ವಾರ್ಥಸುಖನಿಷ್ಠ ವಾಗಿತ್ತು. ಅಲ್ಲದೆ, ಮಾಲಿನಿಯ ವಿದ್ಯೆ ಮತ್ತು ಆಧುನಿಕ ಭಾವನೆಗಳಿಗೆ ತಕ್ಕಂತೆ ಅವಳನ್ನು ಸರ್ವವಿಧಗಳಲ್ಲಿಯೂ ಸುಖಿಯನ್ನಾಗಿಯೇ ಮಾಡಲು ಅವನು ನಿಶ್ಚಯಿಸಿದನು. ಮಾಲಿನಿಯನ್ನು ತಾನು ಮದುವೆಯಾಗುವುದರಲ್ಲಿ ಬಾಧಕಕ್ಕಿಂತ ಸಾಧಕವೇ ಹೆಚ್ಚಾಗಿ ತೋರಿತವನಿಗೆ. ಸರಿ, ತನ್ನ ಆಲೋಚನೆ ಯನ್ನು ನಿಸ್ಸಂಕೋಚವಾಗಿ ಮಾವನ ಮುಂದಿಟ್ಟನು. ಗಂಡ ಹೆಂಡಿರು ತಮ್ಮ ತಮ್ಮಲ್ಲಿ ಆಲೋಚನೆ ಮಾಡಿ ಅಳಿಯನ ಸಲಹೆಗೆ ಸಮ್ಮತಿಯಿತ್ತರು. ಮೂವರೂ ಸೇರಿ ಮಾಲಿನಿಯ ಮದುವೆ ಜ್ಯೇಷ್ಠಮಾಸದಲ್ಲಿ ನಡೆಯತಕ್ಕದ್ದೆಂದು ತೀರ್ಮಾನಿಸಿಬಿಟ್ಟರು. ಯಾರೂ ಮಾಲಿನಿಯ ನಿಜವಾದ ಸುಖವನ್ನು ಗಮನಕ್ಕೆ ತಂದುಕೊಳ್ಳಲೇ ಇಲ್ಲ. ರಾಜಾರಾಯ ಸೀರೆ, ಒಡವೆ ವಸ್ತುಗಳನ್ನು ತಂದು ಮಾಲಿನಿಯ ಆಯ್ಕೆಗಾಗಿ ಅವಳ ಮುಂದೆ ರಾಶಿಯೊಟ್ಟಿದಾಗಲೇ ಅವಳಿಗೆ ತನ್ನ ಮದುವೆಯ ವಿಚಾರ ತಿಳಿದದ್ದು. ಆಗ ಅವಳ ಮುಖ ಸಪ್ಪೆ ಬಿದ್ದಿತು: ಮನಸ್ಸು ಅತ್ತ ಇತ್ತ ಹೊಯ್ದಾಡಿತು. ಅಕ್ಕನ ಮಗುವಿನ ರಕ್ಷಣೆಯ ಭಾರ, ಭಾವನಿಗೆ ಅವಳು ಹೊತ್ತ ಋಣ, ಮಾತಾಪಿತೃಗಳ ವಚನಪರಿಪಾಲನೆ—ಈ ಕರ್ತವ್ಯತ್ರಯಪಾಶದಿಂದ ಅವಳು ಬಂಧಿತಳಾದಳು. ಅವಳ ಹೃದಯದ ಹಂಬಲಿನ ಹಕ್ಕಿಯ ಆರ್ತನಾದ ಈ ಪಾಶಕ್ಕೆ ಸಿಲುಕಿ ಅದೆಲ್ಲಿಯೋ ಉಡುಗಿ ಹೋಯಿತು. ಮದುವೆಯ ಮಾತು ಅವಳನ್ನು ಹಠಾತ್ತನೆ ಎದುರಿಸಿದಾಗ, ಮನಸ್ಸಿನಲ್ಲಿ ಹೊಯ್ದಾಟ ಪ್ರಾರಂಭವಾದಾಗ, ಅವಳು ಕುಮುದಿನಿಯ ಮುದ್ದು ಮಗುವನ್ನು ತೊಡೆಯ ಮೇಲೆ ಮಲಗಿಸಿಕೊಂಡು ಶೀಸೆಯಿಂದ ಅದಕ್ಕೆ ಹಾಲೂಡಿಸುತ್ತಿದ್ದಳು; ಅವಳ ಮುಂದಿನ ವಿಚಾರಲಹರಿಗೆ ಆ ಮಗು ಅಣೆಕಟ್ಟು ಕಟ್ಟಿದಂತಿತ್ತು. ಮದುವೆಗೆ ಒಪ್ಪದಿದ್ದರೆ ಆ ತಬ್ಬಲಿಗೂಸನ್ನು ತೊಡೆಯಿಂದ ತಳಕ್ಕೆ ತಳ್ಳಿದಂತೆ ಎಂದು ಅವಳಿಗೆ ಭಾಸವಾಯಿತು. ತಾನು ಅಷ್ಟು ಕ್ರೂರಳೆ? ಏನೂ ಅರಿಯದ, ತನ್ನ ಮಡಿಲಿಗೆ ಬಿದ್ದ ಶಿಶುವಿನ ಸುಖಕ್ಕಿಂತ ತನ್ನ ಸುಖವೇ ಹೆಚ್ಚಿನದಾಯಿತೆ? ಹಾಲು ಕುಡಿದು ತಣಿದು ಹಾಗೆಯೇ ನಿದ್ದೆಹೋದ ಮಗು ವಿನ ಮುದ್ದುಮೊಗವನ್ನು ದಿಟ್ಟಿಸುತ್ತ ತನ್ನ ಮದುವೆಗೆ ಮೌನದ ಸಮ್ಮತಿ ಯಿತ್ತಳು ಮಾಲಿನಿ.

ಹಿರಿಯ ಮಗಳ ಅಶುಭಕಾರ್ಯಗಳಿಗಾಗಿ ಬಂದು ಅಲ್ಲಿಯೇ ಉಳಿದು ಕೊಂಡಿದ್ದ ತಾಯಿ ತಂದೆ ಕಿರಿಯ ಮಗಳ ವಿವಾಹದ ಶುಭಕಾರ್ಯವನ್ನು ಮುಗಿಸಿಕೊಂಡು, ದುಃಖವನ್ನು ಅರೆಮರೆತು, ಹೊಸ ಹಿಗ್ಗಿನಿಂದ ಹಿಂದಿ ರುಗಿದರು.

ರಾಜಾರಾಯನಿಗಂತೂ ಯಾವ ವ್ಯತ್ಯಾಸವೂ ಅಷ್ಟಾಗಿ ಕಾಣಲಿಲ್ಲ: ಕುಮುದಿನಿಯ ಸ್ಥಾನದಲ್ಲಿ ಅವಳಿಗಿಂತ ಚೆಲುವೆಯಾದ, ಚಿಕ್ಕವಳಾದ ಮೇಲಾಗಿ ವಿದ್ಯಾವಂತಳಾದ ಮಾಲಿನಿ ಇದ್ದಳೀಗ. ಅಥವಾ ಕಂಡುಬಂದ ಒಂದು ದೊಡ್ಡ ವ್ಯತ್ಯಾಸವೆಂದರೆ ತನ್ನ ಹೃದಯದಲ್ಲಿಯೆ: ಹೆಚ್ಚಿನ ಭವಿಷ್ಯ ಸುಖದ ಸುಂದರ ಕಲ್ಪನೆ.

ಮಾಲಿನಿ ಮಾತ್ರ ತನ್ನ ಬಾಳಿನಲ್ಲಿ ದೊಡ್ಡ ವ್ಯತ್ಯಾಸವಾದುದನ್ನು ಕಂಡು ಕೊಂಡಳು. ಯಾರು ಭಾವನೆನ್ನಿಸಿದ್ದನೋ ಅವನಿಂದು ಗಂಡ; ಯಾರ ಅಪ್ಪುಗೆ ಒಮ್ಮೆ ಅಹಿತವೆನಿಸುತ್ತಿರಲಿಲ್ಲವೋ ಅವನ ಕೈಯ ಸೊಂಕೇ ಕಹಿ ಯೆನಿಸಿತು; ಯಾರ ರೂಪ ಹಿಂದೆ ತನಗೆ ಅಸಹ್ಯವೆನಿಸದೆ ಗಣನೆಗೆ ಬರುತ್ತಿರ ಲಿಲ್ಲವೋ ಅವನ ರೂಪವಿಂದು ಅಷ್ಟಾವಕ್ರವಾಗಿ ಕಂಡಿತು; ಯಾರ ಹಾಸಿಗೆ ಯಲ್ಲಿ ತನ್ನ ಅಕ್ಕ ಪಾಲುಗೊಳ್ಳುತ್ತಿದ್ದಳೋ ಆ ಹಾಸಿಗೆ ಹೇಸಿಗೆಯ ತಾಣ ವೆನಿಸಿತು. ಮನವನ್ನು ಕೊಡಲು ಹೃದಯವೊಪ್ಪದು: ಮೈಯನ್ನು ಕೊಡಲು ಮನಸ್ಸೊಪ್ಪದು. ಏನು ಕೇಳಿದರೂ ತನ್ನ ಅಕ್ಕನ ಮಗುವಿನ ಲಾಲನೆ ಪಾಲನೆಯ ನೆಪವೊಡ್ಡುವಳು. ತನ್ನ ಮನೋನಿಶ್ಚಯದ ಕಾಪಿಗೆ ಕೆಲಕಾಲ ಆ ಮಗುವನ್ನು ಕೋಟೆಯನ್ನಾಗಿ ಮಾಡಿಕೊಂಡಳು. ವಿಧಿ ಆ ಕೋಟೆ ಯನ್ನೊಡೆದು ದಾಳಿ ಮಾಡಿತು: ಲಿವರ್ ಗಡ್ಡೆಯಾಗಿ ಮಗು ಕಣ್ಣು ಮುಚ್ಚಿತು. ಮಾಲಿನಿ ಕೊರಗಿದಳು, ಕಂಗೆಟ್ಟಳು. ಭಾವನಾಗಿದ್ದು ಗಂಡನಾದವನನ್ನು ಗಂಡನೆಂದೇ ಎದುರಿಸಬೇಕಾದ ಪರಿಸ್ಥಿತಿಯುಂಟಾಯಿತು.

ಮಾಲಿನಿಯ ವರ್ತನೆಯಿಂದ ಅವಳು ಸುಖವಾಗಿಲ್ಲವೆಂದು ರಾಜಾ ರಾಯನಿಗೆ ಸ್ಪಷ್ಟವಾಯಿತು. ಅವಳ ಸುಖಸಾಧನೆಗಾಗಿಯೇ ಬಗೆಬಗೆಯ ಏರ್ಪಾಡುಗಳನ್ನು ಕೈಗೊಂಡನು. ಅವಳಿಗೆ ಸಮಾಧಾನವಾಗಬಹುದೆಂದು ಕುಮುದಿನಿಯ ಫೋಟೋ ಚಿತ್ರವನ್ನು ದೊಡ್ಡದು ಮಾಡಿಸಿ ತೂಗಹಾಕಿದನು; ಸ್ವಂತ ಸಮಾಧಾನಕ್ಕಾಗಿ ತನ್ನ ಭಾವಚಿತ್ರವನ್ನೂ ಅದರೊಂದಿಗೆ ಜೊತೆಗೂಡಿಸಿ

ದನು. ಮನೆಯ ಮುಂಭಾಗವನ್ನು ಕೆಡವಿಸಿ, ಆಧುನಿಕ ರೀತಿಯ ಸಿಮೆಂಟ್ ಕಾನ್‌ಕ್ರೀಟ್ ಕಟ್ಟಡ ಕಟ್ಟಿಸಿದನು. ಮನೆಯ ಮುಂದೆ ಕೈತೋಟ ಏರ್ಪಡಿಸಿ ಒಬ್ಬ ಮಾಲಿಯನ್ನು ಗೊತ್ತುಮಾಡಿದನು. ಮನೆಯ ಒಳಗಿನ ಶೃಂಗಾರಕ್ಕೂ ಹೆಚ್ಚಿನ ಗಮನ ಕೊಟ್ಟನು. ಅಡಿಗೆಯವರನ್ನು ನೇಮಿಸಬೇಕೆಂದಾಗ ಮಾಲಿನಿಯೇ ಬೇಡವೆಂದಳು. ಬೇಸರವಿಲ್ಲದೆ ಹೊತ್ತು ಕಳೆಯುವುದಕ್ಕಾಗಿ, ರೇಡಿಯೋ ಒಂದನ್ನು ತರಿಸಿಟ್ಟನು. ಹಿಂದಿಯ ಶಿಕ್ಷಣಕ್ಕೂ ಸಂಗೀತ ಶಿಕ್ಷಣಕ್ಕೂ ಗೊತ್ತು ಮಾಡಿದನು. ಇದು ಕೆಲವು ಕಾಲ ನಡೆದು, ಮಾಲಿನಿಗೆ ಬೇಡವೆನಿಸಿ ನಿಂತು ಹೋಯಿತು. ಗಂಡನ ಬಲವಂತಕ್ಕೆ ಒಮ್ಮೊಮ್ಮೆ ಅವನೊಂದಿಗೆ ಸಿನಿಮಾಕ್ಕೋ ಸಂಗೀತಕ್ಕೋ ಹೋಗುವಳು. ಆದರೆ ಯಾವುದರಿಂದಲೂ ಅವಳಿಗೆ ನಿಜವಾದ ಶಾಂತಿಸುಖಗಳು ದೊರೆಯದಾಯಿತು. ಕಥೆ, ಕಾದಂಬರಿಗಳನ್ನು ಓದುತ್ತ, ಕಾಲ್ಪನಿಕಪ್ರಪಂಚ ವ್ಯವಹಾರಗಳಲ್ಲಿ ಮಗ್ನಳಾಗಿ, ವಾಸ್ತವಪ್ರಪಂಚದ ದುಃಖವನ್ನು ಮರೆಯುತ್ತಿದ್ದಳು. ಮತ್ತೆ ವಾಸ್ತವಪ್ರಪಂಚಕ್ಕೆ ಇಳಿದಾಗ ವಾಸ್ತವ ಜೀವನವನ್ನು ಎದುರಿಸುವುದೇ ಅವಳಿಗೆ ಒಂದು ಸಮಸ್ಯೆಯಾಗಿತ್ತು. ಒಂದೆರಡು ಸಲ ತವರು ಮನೆಗೂ ಹೋಗಿ ನೋಡಿದಳು. ಮದುವೆಯಾದ ಹೆಂಗುಸು ತವರುಮನೆಗೆ ಹೋದಾಗ ತಾಯಿ ತಂದೆಗೂ ತನ್ನ ಅಸುಖದ ವಿಚಾರ ಹೇಳಿಕೊಳ್ಳಲಿಲ್ಲ. ಅದನ್ನು ಹೇಳಿಕೊಳ್ಳುವುದೆಂದರೆ, ತನ್ನ ಹೃದಯವನ್ನೇ ಅವರ ಮುಂದೆ ತೆರೆದಿಡಬೇಕು. ತಾಯಿ ತಂದೆಯಿಂದ ದೊರೆಯಬಹುದಾದ ಪರಿಹಾರವೆಂದರೆ, ಸಾಂಪ್ರದಾಯಿಕ ನೀತಿಬೋಧೆ: ಗಂಡ ಹೇಗೇ ಇರಲಿ ಆತನನ್ನು ದೇವರೆಂದು ಭಾವಿಸಿ ಅವನನ್ನು ಸೇವಿಸುವುದು. ಇದನ್ನು ಅವಳು ತಾನಾಗಿಯೇ ಆಲೋಚಿಸಿದ್ದಳು ; ಈ ಬಗೆಯ ಪಾತಿವ್ರತ್ಯ ತನ್ನಿಂದ ಅಸಾಧ್ಯವಾಗಿ ಕಂಡಿತವಳಿಗೆ. ವಿಚಾರಬುದ್ಧಿಯುಳ್ಳ ಮಾಲಿನಿಗೆ ಸಾಮಾನ್ಯರಿಗೂ ಹೊಳೆಯಬಹುದಾದ ಸುಲಭೋಪಾಯ ಹೊಳೆಯದೆ ಇರಲಿಲ್ಲ: ಯಾರ ಸಹವಾಸ ಅ–ಸಹ್ಯವಾಗಿದೆಯೋ ಅವನಿಂದ ದೂರ ಹೋಗುವುದು : ಎಂದರೆ, ಗಂಡನನ್ನು ತೊರೆಯುವುದು. ತೊರೆದು ಎಲ್ಲಿಗೆ ಹೋಗುವುದು ? ಯಾರೊಂದಿಗೆ ? ವಿನಿಯೋಗವಾಗದೆ ತನ್ನ ಹೃದಯಸಂಪುಟದಲ್ಲಿ ಬಯ್ತಿಟ್ಟ ಪ್ರೇಮರತ್ನವನ್ನು ಯಾರಿಗೆ ಅರ್ಪಿಸುವುದು ? ಕೇವಲ ಪ್ರೇಮವೊಂದನ್ನೇ ಅರ್ಪಿಸುವುದು ಹೇಗೆ ? ಹೂವು ಇದ್ದೆಡೆಯಲ್ಲೆ ಇದ್ದು ಬಯಸಿದವರಿಗೆ ದೂರದಿಂದಲೇ ಕಂಪನ್ನು ಬೀರುವು

ದಿಲ್ಲವೇ ? ಕಂಪನ್ನು ಕೊಂಡಾತ ಹೂವನ್ನೂ ಬಯಸಿದರೆ ? ಮಾಲಿನಿಗೆ ಯಾವುದೂ ಬಗೆಹರಿಯಲಿಲ್ಲ. ಈ ನಡುವೆಯಲ್ಲಿ, ಮೆಯ್ಗೊಡದ ಮಡದಿಯ ವರ್ತನೆಯನ್ನು ಯಾವುದೋ ದೈಹಿಕರಹಸ್ಯಸಂಗೋಪನವೆಂದು ತಪ್ಪಾಗಿ ತಿಳಿದು ಸ್ತ್ರೀವೈದ್ಯ ಪರೀಕ್ಷೆಗೆ ಬೇರೆ ಒಳಗಾಗಬೇಕೆಂದು ಗಂಡ ಸೂಚಿಸುತ್ತಿದ್ದಾನೆ. ಮಾಲಿನಿಯ ಸಮಸ್ಯೆ ಮತ್ತಷ್ಟು ತೊಡಕಾಯಿತು. ಈ ಪರಿಸ್ಥಿತಿಯಲ್ಲಿಯೇ ಅವಳಿಗೆ ನಾಗಭೂಷಣನ ನೆನಪಾದದ್ದು : ಅವನಿಗೆ ಪತ್ರ ಬರೆಯುವ ಸಾಹಸ ಮಾಡಿದ್ದು.

× × × ×

ಮಾಲಿನಿ ಇದೆಲ್ಲವನ್ನೂ ನಿಸ್ಸಂಕೋಚವಾಗಿ ನನಗೆ ವಿವರಿಸಿ ಹೇಳಿದಳು. ನಾನು ಮೌನವಾಗಿ ಕೇಳುತ್ತ ಕುಳಿತಿದ್ದೆ. ಮಾಲಿನಿ ತನ್ನ ಕಥೆ ಮುಗಿಸಿ, ನೀಳವಾಗಿ ಉಸಿರೆಳೆದು, ಕ್ಷಣಕಾಲ ಮೌನವಾಗಿದ್ದಳು.

" ನನ್ನ ಸಮಸ್ಯೆಗೆ ಪರಿಹಾರಮಾರ್ಗವನ್ನು ಸೂಚಿಸಬಲ್ಲಿರಾ ?" ಎಂದು ದೈನ್ಯದಿಂದ ಬೇಡಿದಳು ಮಾಲಿನಿ.

ನನಗೆ ಏನು ಉತ್ತರ ಕೊಡುವುದಕ್ಕೂ ತೋರಲಿಲ್ಲ. ಮೌನವಾಗಿದ್ದೆ. ಮಾಲಿನಿಯೇ ಮೌನವನ್ನು ಮುರಿದಳು :

" ನಿಮಗೆ ಮದುವೆಯಾಗಿದೆಯೆ ?"

" ಇಲ್ಲ."

" ಹಾಗಾದರೆ ನಾನು ಬಯಸುವ ಪರಿಹಾರವನ್ನು ನಿಮ್ಮಿಂದ ಪಡೆಯ ಬಹುದಲ್ಲವೆ ?"

ನಿಮಗೆ ಸುಳ್ಳೇಕೆ ಹೇಳಲಿ ? ಮಾಲಿನಿ ಈ ಮಾತುಗಳನ್ನಾಡಿದಾಗ ನನ್ನ ಮೈ ರೋಮಾಂಚವಾಯಿತು. ಅವಳ ರೂಪರಾಶಿ ಭಗ್ಗನೆ ಪ್ರಜ್ವಲಗೊಂಡು ತನ್ನ ಜ್ವಾಲೆಯ ನಾಲಗೆಯಿಂದ ನನ್ನನ್ನು ನೆಕ್ಕುತ್ತಿರುವಂತೆ ಭಾಸವಾಯಿತು. ನಾನು ಅವಳಿಗೆ ಮಾರುಹೋದೆ; ಮೈಮರೆತೆ; ಮಾತು ಮರೆತೆ. ವಿದ್ಯು ದಾಲಿಂಗನದಿಂದ ಸ್ತಂಭೀಭೂತನಾದವನಂತೆ ನೀರವನಿಶ್ಚಲನಾಗಿ ಕುಳಿತೆ. ಎಚ್ಚರಗೊಂಡಮೇಲೆ, ಕೇವಲ ಭಾವಾವೇಶವಶಳಾಗಿ ಮಾಲಿನಿ ಆ ಮಾತು ಗಳನ್ನು ಆಡಿರುವಳೆಂದು ಅರಿತೆ.

“ನನಗೆ ಆ ಸಾಮರ್ಥ್ಯವಾಗಲಿ ಅರ್ಹತೆಯಾಗಲಿ ಇಲ್ಲವಲ್ಲಾ” ಎಂದೆ ನಾನು.

“ಇದೆ ಎಂದು ನಾನು ಬಲ್ಲೆ.”

“ಹಾಗಾದರೆ ನೀವು ನನ್ನನ್ನು ಮೆಚ್ಚಿಕೊಂಡಿರುವಿರೆಂದು ತಿಳಿಯ ಲೇನು ?”

“ಎಂದಿನಿಂದಲೂ ಮೆಚ್ಚಿಕೊಂಡಿದ್ದೇನೆ. ಈಗಂತೂ ನಿಮ್ಮನ್ನು ನನ್ನ ಹೃದಯದಲ್ಲಿಟ್ಟು ಪೂಜಿಸುತ್ತಿದ್ದೇನೆ.”

ನಾನು ಮಾಲಿನಿಯ ಆರಾಧ್ಯ ದೇವತೆಯೆಂದು ಕೇಳಿ ತಿಳಿದು ಸಂತೋಷ ವಾಯಿತು, ಹೆಮ್ಮೆಯಾಯಿತು ; ಸ್ವಲ್ಪ ಕಳವಳವೂ ಆಯಿತು ; ಅಚ್ಚರಿಯೂ ಆಯಿತು.

“ಹಾಗಾದರೆ ನನ್ನನ್ನು ಅನುಸರಿಸಲು ನಿಶ್ಚಯ ಮಾಡಿದ್ದೀರೇನು ?”

“ಹೌದು, ನೀವು ಹೇಳಿದಂತೆ ನಡೆಯಲು ಸಿದ್ಧಳಾಗಿದ್ದೇನೆ.”

“ಆಲೋಚನೆ ಮಾಡಿನೋಡಿ, ಓಡಿನಿಂದ ಒಲೆಗೆ ಬಿದ್ದಂತಾದೀತು.”– ನನ್ನ ರೂಪನ್ನು ನೆನೆದು ಹೇಳಿದೆ.

“ಆಲೋಚನೆ ಮಾಡಿದ್ದೇನೆ. ನಿಮ್ಮ ಕವಿವಾಣಿಯಲ್ಲಿ ನನಗೆ ಸಂಪೂರ್ಣ ಭರವಸೆಯುಂಟು. ಸಮಾಜಕ್ಕೆ ಗುರುವಾಗಬಲ್ಲ ನೀವು ನನಗೂ ಗುರುವಾಗಿ ಮಾರ್ಗ ತೋರಿಸುವುದು ನಿಮಗೆ ಸಾಧ್ಯವೆಂದು ನಂಬಿದ್ದೇನೆ.”

ಎಲಾ, ನಾನು ಹೇಗೆ ವಂಚಿತನಾದೆ ಎನ್ನಿಸಿತು. ನಾನು ನಾನೇ ಎಂದು ತಿಳಿದು ನಾಗಭೂಷಣನ ಸ್ಥಾನದಲ್ಲಿದ್ದುದನ್ನು ಮರೆತುಬಿಟ್ಟಿದ್ದೆ. ನಿಷ್ಕಳಂಕ ಹೃದಯದ ಹತಭಾಗಿನಿಯ ಎದುರಿನಲ್ಲಿ ಈ ನಟನೆಯನ್ನು ಮುಂದುವರಿಸು ವುದು ನನಗೇಕೋ ಸರಿಕಾಣಲಿಲ್ಲ. ನಾನು ನಾಗಭೂಷಣನಲ್ಲ ಎಂದು ಒಪ್ಪಿ ಕೊಳ್ಳುವುದೂ ಕಷ್ಟವಾಗಿ ಕಂಡಿತು. ನಾನು ಹೇಳುವ ನಿಜವನ್ನೆ ಅವಳು ನಂಬದಿರಬಹುದು. ಆದದ್ದಾಗಲಿ ಎಂದು ಧೈರ್ಯ ಮಾಡಿ ಹೇಳಿಬಿಟ್ಟೆ :

“ನಾನು ಕವಿ ನಾಗಭೂಷಣನಲ್ಲ : ಅವನ ಸ್ನೇಹಿತ.”

“ಹ್ಞಾ !” ಎಂದು ಬೆಕ್ಕಸ ಬೆರಗಾದಳು ಮಾಲಿನಿ.

ನಾನು ನಡೆದ ಸಂಗತಿಯನ್ನು ಎರಡು ಮಾತಿನಲ್ಲಿ ತಿಳಿಸಿದೆ. ಆದರೆ ನಾಗಭೂಷಣ ತಾನು ಬರದೆ ಅವನ ಪರವಾಗಿ ನನ್ನನ್ನು ಕಳಿಸಿದ್ದುದರ ನಿಜ

ವಾದ ಕಾರಣವನ್ನು ಮಾತ್ರ ತಿಳಿಸಲಿಲ್ಲ. ಹೆಚ್ಚಿನ ಪ್ರಶ್ನೆಗೆ ಅವಕಾಶವಾಗದಂತೆ, ಅವನ ದೇಹಸ್ಥಿತಿ ಚೆನ್ನಾಗಿರಲಿಲ್ಲವೆಂದು ಒಂದು ಸುಳ್ಳು ಹೇಳಿದೆ: ಮಾಲಿನಿಗೆ ಆತಂಕವಾಗಬಾರದೆಂದು, ಅವನೇ ನನ್ನನ್ನು ತನ್ನ ಪರವಾಗಿ ಹೋಗಿ ವಿಷಯ ವನ್ನು ತಿಳಿದುಬಾರೆಂದು ಕಳಿಸಿರುವುದಾಗಿಯೂ ಹೇಳಿದೆ.

"ಅವರೇ ಬಂದಿದ್ದರೆ ಚೆನ್ನಾಗಿತ್ತು. ಆದರೂ ಚಿಂತೆಯಿಲ್ಲ. ನಿಮ್ಮ ಸಲಹೆ ಏನು, ಹೇಳಿ."

"ಮೊದಲೇ ಹೇಳಲಿಲ್ಲವೇ? ನಾನು ಅಷ್ಟು ಸಮರ್ಥನಲ್ಲ. ಅಲ್ಲದೆ, ಆಲೋಚನೆ ಮಾಡದೆ ಈ ಕ್ಷಣದಲ್ಲಿ ಸಲಹೆ ಕೊಡಬಹುದಾದಷ್ಟು ಸುಲಭವಾದ ಸಮಸ್ಯೆಯಲ್ಲ ನೀವು ನನ್ನ ಮುಂದಿಟ್ಟಿರುವುದು."

"ಹಾಗಾದರೆ ಏನು ಮಾಡಬೇಕೆನ್ನುತ್ತೀರಿ?"

"ಸ್ವಲ್ಪ ತಾಳ್ಮೆ ವಹಿಸಿ. ನೀವು ಹೇಳಿದ್ದನ್ನೆಲ್ಲ ನಾಗಭೂಷಣನಿಗೆ ತಿಳಿಸುತ್ತೇನೆ. ಆಲೋಚನೆ ಮಾಡಿ ಅವನು ನಿಮಗೆ ಪರಿಹಾರವನ್ನು ಬರೆದು ತಿಳಿಸುತ್ತಾನೆ. ಆಗಬಹುದಷ್ಟೆ?"

"ಆಗಬಹುದು. ಆದರೆ, ಬರೆಯುವುದು ಬೇಡ. ಅವರೇ ಬಂದರೆ ಮೇಲು. ಎಂದು ಬರುವುದೆಂಬ ಬಗ್ಗೆ ಮತ್ತೆ ಬರೆಯುತ್ತೇನೆ. ದಯವಿಟ್ಟು ಅವರ ವಿಳಾಸ ತಿಳಿಸಿ."

ನಾನು ನಾಗಭೂಷಣನ ವಿಳಾಸವನ್ನು ಬರೆದುಕೊಟ್ಟು ಹೊರಡಲನು ವಾಗಿ ಎದ್ದು ನಿಂತೆ. ವಿದ್ಯುದ್ದೀಪ ಮಿನುಗಿ ರಾತ್ರಿ ಒಂಬತ್ತು ಗಂಟೆ ಎಂದು ಸೂಚಿಸಿತು.

## ೪

ಮಾಲಿನಿ ನನಗೆ ಹೇಳಿದ ಕಥೆಯೆಲ್ಲವನ್ನೂ ಮಾರನೆಯ ದಿನವೆ ನಾನು ನಾಗಭೂಷಣನಿಗೆ ಯಥಾವತ್ತಾಗಿ ವರದಿ ಮಾಡಿದೆ. ಅವಳು ನನ್ನೊಡನೆ ಗೌರವದಿಂದಲೂ ಸಂಯಮಶೀಲದಿಂದಲೂ ನಡೆದುಕೊಂಡ ರೀತಿಯನ್ನು ಶ್ಲಾಘಿಸಿದೆ. ನಾನು ಹೇಳಿದ್ದನ್ನೆಲ್ಲ ಕೇಳಿ, ನಾನು ಬಹಳ ವಿವೇಕದಿಂದ ವರ್ತಿಸಿ

ದ್ದೆನೆಂದು ನಾಗಭೂಷಣ ನನ್ನನ್ನು ಶ್ಲಾಘಿಸಿದ. ನಾನು ಪರಿಹಾರವನ್ನು ಸೂಚಿಸದೆ ಬಂದದ್ದಕ್ಕಾಗಿ ಆಕ್ಷೇಪಿಸಿದ.

"ಸುಲಭವಾದ ಸಮಸ್ಯೆಯಾಗಿದ್ದರೆ ನಾನೇ ಪರಿಹಾರ ಸೂಚಿಸಿ ಬಿಡುತ್ತಿದ್ದೆ. ನನಗೇನೋ ಬಹಳ ತೊಡಕಿನದಾಗಿ ಕಂಡಿತು. ಅವಳು ಬಯಸಿರುವುದಾದರೂ ಕವಿ ನಾಗಭೂಷಣನ ಪರಿಹಾರವನ್ನು. ನಾನು ವಿವೇಕ ದಿಂದ ನಡೆದುಕೊಂಡಿರುವೆನೆಂದು ನೀನೇ ಒಪ್ಪಿದ್ದೀಯೆ. ಆದ್ದರಿಂದ ಆ ಕಾರ್ಯಭಾರವನ್ನು ನೀನೇ ವಹಿಸಿಕೋ. ಅವಳ ಪತ್ರ ಬರುವವರೆಗೆ ಚೆನ್ನಾಗಿ ಆಲೋಚನೆ ಮಾಡು. ನಿನಗೆ ಹೋಗುವುದಕ್ಕೆ ಇನ್ನೂ ಅಳುಕಿರುವುದಾದರೆ ಮತ್ತೊಮ್ಮೆ ನಾನೇ ರಾಯಭಾರ ವಹಿಸುತ್ತೇನೆ" ಎಂದು ನಕ್ಕೆ.

"ಆಗಲಿ, ಅವಳ ಪತ್ರ ಬರಲಿ, ನೋಡೋಣ. ನಾನೇ ಹೋದರೂ ಹೋದೇನು. ಅವಳಿಗೆ ಬೇಕಾದ್ದು ಸಲಹೆಯೇ ಹೊರತು ನಾನಲ್ಲವಲ್ಲ!" ಎಂದು ನಾಗಭೂಷಣನೂ ನಕ್ಕನು.

× × × ×

ಈ ವಿಚಾರ ನಮ್ಮಿಬ್ಬರ ಮನಸ್ಸಿನಿಂದಲೂ ಸಂಪೂರ್ಣವಾಗಿ ಅಳಿಸಿಯೇ ಹೋಗಿತ್ತು. ಎರಡು ಮೂರು ತಿಂಗಳ ಮೇಲೆ ಕಳೆದಿರಬೇಕು. ಒಂದು ದಿನ ಇದ್ದಕ್ಕಿದ್ದಹಾಗೆಯೇ ನಾಗಭೂಷಣ ಮಾಲಿನಿಯಿಂದ ಕಾಗದ ಬಂದಿದೆ ಯೆಂದು ತಿಳಿಸಿದ.

"ನೀನೇ ಹೋಗುತ್ತೀಯೋ, ನಾನೇ ಹೋಗಲೋ" – ನಾನು ಕೇಳಿದೆ.

"ನಾನೇ ಹೋಗಿಬರುವುದೆಂದು ತೀರ್ಮಾನ ಮಾಡಿದ್ದೇನೆ."

"ಪರಿಹಾರವನ್ನು ಕುರಿತು ಯೋಚನೆ ಮಾಡಿದ್ದೀಯೋ? ಅಥವಾ ನನ್ನ ಹಾಗೆಯೇ 'ಹೋದ ಪುಟ್ಟ ಬಂದ ಪುಟ್ಟ' ಮಾಡುತ್ತೀಯೋ?"

"ನನ್ನ ಪರಿಹಾರ ಮಾರ್ಗ – ನನ್ನ ಜೀವನ ಸಿದ್ಧಾಂತ – ಸಿದ್ಧವಾಗಿಯೇ ಇದೆ. 'ಪಾಲಿಗೆ ಬಂದದ್ದು ಪಂಚಾಮೃತ' ಎಂದುಕೊಂಡು, ನೋವನ್ನೆಲ್ಲ ನುಂಗಿಕೊಂಡು, ಬಾಳಿನ ಕಹಿಯನ್ನು ಮೈಗೂಡಿಸಿಕೊಳ್ಳುವುದು."

"ನಿನ್ನ ಈ ವೇದಾಂತದ ಗುಳಿಗೆ ಅವಳಿಗೆ ಪ್ರಯೋಜನವಾಗಲಾರದು. ಸ್ವಯಂವೈದ್ಯದಲ್ಲಿ ಈ ಔಷಧ ಪ್ರಯೋಗ ಮಾಡಿ ನೋಡಿ ಅವಳು ಕೈಬಿಟ್ಟಿರು ವಂತೆ ಕಾಣುತ್ತದೆ."

" ನಿಷ್ಪ್ರಯೋಜಕವಾದ ಗುಳಿಗೆಯೂ ವೈದ್ಯನ ಹಸ್ತಗುಣದಿಂದ ಪರಿಣಾಮಕಾರಿಯಾಗಬಹುದು. ಜೊತೆಗೆ, ಅವಳಿಗೆ ನನ್ನಲ್ಲಿ ನಂಬಿಕೆಯೂ ಇದೆ. ಅಲ್ಲದೆ, ನನ್ನ ಸ್ವಂತ ನಿದರ್ಶನವನ್ನೇ ಅವಳ ಮುಂದೆ ಇಡುತ್ತೇನೆ."

" ಶುಭಮಸ್ತು " ಎಂದೆ ನಾನು.

೫

ನಾಗಭೂಷಣ ಮಾಲಿನಿಯ ಮನೆಗೆ ಹೋದ ಮಾರನೆಯ ದಿನ ಹೊತ್ತಿಗೆ ಮುಂಚೆಯೇ ಎದ್ದು ಅವನ ಮನೆಗೆ ಹೋದೆ. ಇಬ್ಬರೂ ಕಾಫಿ ಕುಡಿದಾದ ಮೇಲೆ, ಲಾಲ್‌ಬಾಗ್ ಕಡೆ ಹೊರಟೆವು. ಯಾವ ಮಾತನ್ನೂ ಆಡದೆ ಅವನು ಮೌನವಾಗಿದ್ದ: ಏನೋ ಗಾಢವಾದ ಆಲೋಚನೆಯಲ್ಲಿ ಮುಳುಗಿದಂತಿತ್ತು. ದಾರಿಯಲ್ಲಿ ನಾನೇ ಮಾತಿಗೆ ಮೊದಲು ಮಾಡಿದೆ: ನೇರವಾಗಿ ಮಾಲಿನಿಯ ಪ್ರಕರಣವನ್ನೇ ಎತ್ತಿದೆ.

" ನಿನ್ನೆ ಮಾಲಿನಿಯ ಮನೆಗೆ ಹೋಗಿದ್ದೆಯಾ ?"

" ಹೋಗದೆ ಉಂಟೆ ? ಹೋಗಿದ್ದೆ."

" ಫಲಿತಾಂಶ ಏನು ?"

" ಸಮಸ್ಯೆಯನ್ನು ಪರಿಹರಿಸಹೋಗಿ ನಾನೇ ಸಮಸ್ಯೆಯಲ್ಲಿ ಸಿಲುಕಿದ್ದೇನೆ. ಏನು ನಡೆಯಬಹುದೆಂದು ಶಂಕಿಸಿದೆನೋ ಅದು ನಡೆದುಹೋಯಿತು."

" ಎಂದರೆ ?"

" ಸಮಶ್ರುತಿಯಲ್ಲಿ ನುಡಿಯುವ ಎರಡು ವೀಣೆಗಳ ನಾದ ಒಂದರೊಡನೆ ಒಂದು ಬೆರೆಯುವಂತೆ ನಮ್ಮಿಬ್ಬರ ಹೃದಯಗಳು ಒಂದುಗೂಡಿದುವು."

" ಹಾಗಿದ್ದಮೇಲೆ ಮಾಲಿನಿಯ ಸಮಸ್ಯೆ ಪರಿಹಾರವಾದಂತೆಯೆ ಆಯಿತು."

" ಆಗಲಿಲ್ಲ. ಅದು ಇನ್ನೂ ಸಿಕ್ಕಾಯಿತು. ಅವಳ ಸಮಸ್ಯೆ ಈಗ ನನ್ನ ಸಮಸ್ಯೆಯೂ ಆಯಿತು."

" ಅದು ಹೇಗೆ? ಸ್ವಲ್ಪ ವಿವರಿಸಿ ಹೇಳಬಾರದೇ ?"

" ಸ್ವಲ್ಪ ತಡಿ, ಹೇಳುತ್ತೇನೆ " ಎಂದು ನಾಗಭೂಷಣ ಮತ್ತೆ ಮೌನದಲ್ಲಿ ಮುಳುಗಿದ. ಇಬ್ಬರೂ ಲಾಲ್‌ಬಾಗನ್ನು ತಲಪಿ, ಅಲ್ಲಿ ನಿರ್ಜನವಾದೆಡೆಯಲ್ಲಿ

ಒಂದು ಕಡೆ ಕುಳಿತೆವು. ಕುಳಿತು ತುಸ ಹೊತ್ತಾದನೋಲೆ, "ಏನಾಯಿತು? ವಿವರಿಸಿ ಹೇಳು" ಎಂದು ನಾನು ಮತ್ತೆ ಅವನನ್ನು ಪ್ರಶ್ನಿಸಿದೆ. ನಾಗಭೂಷಣ ಹೇಳತೊಡಗಿದ:

"ನಾನು ಮಾಲಿನಿಯ ಮನೆಗೆ ಹೋದ ಕೂಡಲೆ ಅವಳು ನಾನೇ ನಾಗಭೂಷಣನಿರಬೇಕೆಂದು ಊಹಿಸಿ, 'ನೀವು ಕವಿ ನಾಗಭೂಷಣ ತಾನೇ?' ಎಂದು ಆತಂಕ ಕುತೂಹಲಗಳಿಂದ ಕೇಳಿದಳು. ನಾನು 'ಹೌದು' ಎಂದೆ. 'ಇಂದು ಸುದಿನ. ನಾನು ಪುಣ್ಯ ಮಾಡಿದ್ದೆ' ಎಂದು, ಕುಳಿತುಕೊಳ್ಳುವಂತೆ ನನಗೆ ತಿಳಿಸಿ, ಉಪಾಹಾರವನ್ನು ತಂದುಕೊಟ್ಟಳು. ಅವಳ ಚೆಲುವು, ಅವಳ ಸವಿಮಾತು, ಅವಳು ತೋರಿದ ಹಿಗ್ಗು ನಲಿವು, ಸೂಸಿದ ಮಂದಹಾಸ – ಇವೇ ನನಗೆ ಉಪಾಹಾರವಾಯಿತು: ಅವಳು ಮುಂದಿಟ್ಟ ಉಪಾಹಾರದಲ್ಲಿ ನನಗೆ ಸವಿ ಕಾಣಲಿಲ್ಲ. ಹೆಚ್ಚು ಸೀಠಿಕೆಯಿಲ್ಲದೆ ಮಾತುಕತೆಗೆ ಪ್ರಾರಂಭವಾಯಿತು."

"ಈ ಸಲವೂ ಅವಳ ಗಂಡ ಊರಿನಲ್ಲಿ ಇರಲಿಲ್ಲವೆಂದು ಕಾಣುತ್ತದೆ"– ನಾನು ನಡುವೆ ತಿಳಿಯಬಯಸಿದೆ.

"ಊರಿನಲ್ಲಿ ಇದ್ದರು. ಮಲ್ಲೇಶ್ವರದಲ್ಲಿ ಯಾವುದೋ ಮದುವೆಯ ಮನೆಗೆ ಬೆಳಗ್ಗೆಯೇ ಹೊರಟರಂತೆ. ರಾತ್ರಿ ಬರುವುದಾಗಿ ತಿಳಿಸಿ ಹೋಗಿದ್ದ ರಂತೆ. ಲಗ್ನಪತ್ರಿಕೆ ಬಂದಾಗಲೇ ಮದುವೆಯ ಮನೆಗೆ ಹೋಗುವ ಮಾತು ನಡೆದು, ಮಾಲಿನಿ ತಾನು ಬರುವುದಿಲ್ಲವಾಗಿ ಹೇಳಿ, ನನಗೆ ಕಾಗದ ಬರೆದಳಂತೆ.

"ನನಗೂ ಅವಳಿಗೂ ಹೆಚ್ಚಿನ ಮಾತೇನೂ ನಡೆಯಲಿಲ್ಲ. ಗಂಡ ಇದ್ದ ಕ್ಕಿದ್ದ ಹಾಗೆ ಅನಿರೀಕ್ಷಿತವಾಗಿ ಯಾವಾಗ ಬಂದುಬಿಡುವರೋ ಎಂದು ಅವಳಿಗೆ ಭಯ. 'ವಿಷಯವೆಲ್ಲ ನಿಮ್ಮ ಸ್ನೇಹಿತರಿಂದ ನಿಮಗೆ ತಿಳಿದಿದೆ ತಾನೆ?" ಎಂದು ಕೇಳಿದಳು. ನಾನು 'ತಿಳಿದಿದೆ' ಎಂದೆ. 'ಹಾಗಾದರೆ ನಿಮ್ಮ ಸಹಾಯ ಬೇಕು' ಎಂದಳು.

"'ಸಹಾಯವೋ ಸಲಹೆಯೋ?' ಎಂದೆ ನಾನು.

"'ಸಹಾಯ' ಎಂದು ಮತ್ತೆ ಒತ್ತಿ ಹೇಳಿದಳು.

"'ನಿಜವಾಗಿ?' ಎಂದು ಕೇಳಿದೆ.

"'ನಿಜವಾಗಿಯೂ' ಎಂದಳು.

"'ನಾನು ಸಲಹೆ ಕೊಡಲು ಬಂದಸನು. ಸಹಾಯ ನೀಡುವ ಸಾಮರ್ಥ್ಯ ನನಗಿಲ್ಲ' ಎಂದೆ.

"'ನಿಮ್ಮ ಸ್ನೇಹಿತರಿಂದ ಆ ಸಹಾಯ ನಿರೀಕ್ಷಿಸುವುದು ನನಗೆ ಸಾಧ್ಯವಿಲ್ಲದೆ ಹೋಯಿತು. ನಿಮ್ಮನ್ನು ನೋಡಿದ ಕೂಡಲೆ ಅದನ್ನು ನಿಮ್ಮಿಂದ ಪಡೆಯಬಹುದೆಂದು ನನಗೆ ಭರವಸೆಯುಂಟಾಯಿತು.'

"'ಏನು ಸಹಾಯವಾಗಬೇಕು?' ಎಂದು ನಾನು ಕೇಳಿದೆ.

"'ನಿಮ್ಮ ಕವಿ ಹೃದಯದ ಮರುಕ–ಪ್ರೇಮ' ಎಂದಳು.

"ನಾನು ದಿಗ್ಭ್ರಾಂತನಾದೆ. ಕತ್ತಲೆಯಲ್ಲಿ ನಡೆಯುವವನಿಗೆ ಮಿಂಚು ದಾರಿ ತೋರಿದರೂ ಕಣ್ಣು ಕೋರೈಸುವಂತಾಯಿತು. ಬಾಯ ಚಪಲವುಳ್ಳ ರೋಗಿಯ ಕೈಗೆ ಪ್ರಯಾಸವಿಲ್ಲದೆ ಅಪಥ್ಯದ ಪದಾರ್ಥ ಸಿಕ್ಕಿದಂತಾಯಿತು. ಅವಳ ದುಃಖಮಿಶ್ರಿತವಾದ ಪ್ರೇಮಪೂರ್ಣವಾದ ನೋಟ ನನ್ನ ಹೃದಯವನ್ನು ಗೆದ್ದಿತು. ಆದರೂ ಅವಳಿಗೆ ಯಾವ ಒತ್ತಾಸೆಯನ್ನೂ ಕೊಡದೆ, ನಮ್ಮಿಬ್ಬರ ಕರ್ತವ್ಯವೇನೆಂಬುದನ್ನೂ, ಧರ್ಮವೇನೆಂಬುದನ್ನೂ ವಿವರಿಸಿದೆ. ನಾನು ಮದುವೆಯಾದವನೆಂದೂ, ನನ್ನ ಹೆಂಡತಿ ರೂಪವತಿಯಲ್ಲದಿದ್ದರೂ ನನ್ನ ಮನಸ್ಸನ್ನು ಬೇರೆಯ ಕಡೆಗೆ ತಿರುಗಿಸದೆ ಅಸುಖದಲ್ಲಿಯೇ ತೃಪ್ತನಾಗಿ ಬಾಳು ಸಾಗಿಸುತ್ತಿರುವೆನೆಂದೂ, ಅವಳಾದರೂ ಎಷ್ಟೇ ಅಸುಖವಾದರೂ, ಎಷ್ಟೇ ಅಹಿತವಾದರೂ, ಎಷ್ಟೇ ಕಷ್ಟವಾದರೂ ಪತಿಸೇವೆಯಲ್ಲೇ ತೊಡಗಿರುವುದು ಶ್ರೇಯಸ್ಸೆಂದೂ ಬೋಧಿಸಿದೆ. ನನ್ನ ಪರಿಸ್ಥಿತಿಯನ್ನು ಕೇಳಿ ಅವಳಿಗೂ ನನ್ನಲ್ಲಿ ಮರುಕವುಂಟಾಗಿರಬೇಕು, ನನ್ನಲ್ಲಿ ಅವಳ ಪ್ರೇಮಭಾವ ಬಲಿತಿರಬೇಕು. ಅಂತೂ ನನ್ನ ಮಾತಿನಿಂದ ಅವಳಿಗೆ ನಿರಾಶೆಯಾಯಿತು; ಅದು ಅವಳ ಮುಖದಲ್ಲಿ ಮುದ್ರೆಯೊತ್ತಿತ್ತು.

"'ನಾನು ಬೇಡುವುದು ನಿಮ್ಮ ಪ್ರೇಮವನ್ನು. ನಿಮ್ಮ ಸಹವಾಸವನ್ನಲ್ಲ' ಎಂದಳವಳು.

"'ಮನಸ್ಸನ್ನು ತೆತ್ತಮೇಲೆ ಮೈ ಹಿಂದುಳಿದರೂ ಅಧರ್ಮವೇ ಆದೀತು' ಎಂದೆ. ನನ್ನ ತುದಿನಾಲಗೆಯ ಮಾತಿನಿಂದ ನನಗೇ ನಾಚಿಕೆಯಾಯಿತು.

"'ನನ್ನ ಮನಸ್ಸನ್ನು ನಿಮಗೆ ಆಗಲೇ ತೆತ್ತುಬಿಟ್ಟಿದ್ದೇನೆ.'

"'ಮಾಡಿದ ತಪ್ಪನ್ನು ಅರ್ಥಮಾಡಿಕೊಂಡು ಅದಕ್ಕಾಗಿ ಮನಃಪೂರ್ವಕವಾಗಿ ಪಶ್ಚಾತ್ತಾಪಪಟ್ಟರೆ ಮನಸ್ಸನ್ನು ಹಿಂದಕ್ಕೆ ತೆಗೆದುಕೊಂಡಂತಾಗುವುದು.'

"ಮಾಲಿನಿ ಕೊಟ್ಟ ಉತ್ತರದಿಂದ ನನ್ನ ಬಾಯಿ ಕಟ್ಟಿಹೋಯಿತು:

"'ಪ್ರೇಮಜೀವನದಲ್ಲಿ ಅತೃಪ್ತನಾದ ಪುರುಷನೊಬ್ಬನಿಗೆ ಸರ್ವವಿಧದಲ್ಲಿಯೂ ಅವನಿಗೆ ಅರ್ಹಳಾದ ತರುಣಿ ಅವನು ಬಯಸದೆಯೇ ಪ್ರೇಮವನ್ನು ನೀಡಬಂದರೆ ಅದನ್ನು ನಿರಾಕರಿಸುವ ಪುರುಷನೂ ಉಂಟೆ?' ಎಂದು ಕೇಳಿದಳು,

"ಈ ವಾಕ್ಯವನ್ನು ನಾನೇ ಎಲ್ಲಿಯೋ ಬರೆದಿರುವಂತೆ ನನಗೆ ನೆನಪು. ಮಾಲಿನಿ ನನ್ನಿಂದ ಕಲಿತ ಪಾಠವನ್ನು ನನಗೇ ಒಪ್ಪಿಸಿಬಿಟ್ಟಳು.

"'ಮಾಲಿನಿ, ನಿಜ ನುಡಿಯಬೇಕಾದರೆ, ನಾನು ನಿನಗೆ ಮನಸೋತಿದ್ದೇನೆ' ಎಂದುಬಿಟ್ಟೆ.

"'ನಾನು ಧನ್ಯಳಾದೆ' ಎಂದಳು ಮಾಲಿನಿ ಹಿಗ್ಗಿನಿಂದ.

"ಇನ್ನು ಹೆಚ್ಚು ಹೊತ್ತು ನಿಲ್ಲುವುದು ಎಲ್ಲ ದೃಷ್ಟಿಗಳಿಂದಲೂ ಅನುಚಿತವೆಂದು ಬಗೆದು, ಹೊರಡಲು ಸಿದ್ಧನಾಗಿ, 'ಮಾಲಿನಿ, ಇನ್ನು ಬರುತ್ತೇನೆ' ಎಂದು ಮೇಲಕ್ಕೆದ್ದೆ.

"'ಸಂದರ್ಭ ದೊರೆತಾಗ ಮತ್ತೆ ಎಂದಾದರೂ ಬರೆಯುತ್ತೇನೆ. ದಯವಿಟ್ಟು ಬರಬೇಕು' ಎಂದು ಬೇಡಿದಳು.

"'ನೀನು ಬಯಸಿದ್ದು ಪ್ರೇಮ; ಸಹವಾಸವಲ್ಲ. ನೆನಪಿದೆಯೆ?' ಎಂದೆ.

"'ನಾನು ಬಯಸುತ್ತಿರುವುದು ಸಹವಾಸವಲ್ಲ, ದರ್ಶನ' ಎಂದಳು.

"'ಅದಕ್ಕೆ ಇದು ಮೊದಲ ಹಂತ. ಪ್ರೇಮಭಾವನೆಯೊಂದನ್ನೇ ಪವಿತ್ರ ವಸ್ತುವನ್ನಾಗಿ ಉಳಿಸಿಕೊಂಡು, ಕೀಳು ಬಯಕೆಗಳನ್ನು ಕಡೆಗಣಿಸಿ, ಒಬ್ಬರ ಮುಖವನ್ನೊಬ್ಬರು ಮರೆಯಲು ಪ್ರಯತ್ನಿಸೋಣ. ನಾವಿಬ್ಬರೂ ಅನುಸರಿಸಬೇಕಾದ ಮಾರ್ಗ ಇದು. ನಾವು ನಮ್ಮವರಿಗೆ ಎಸಗಿರುವ ದ್ರೋಹದ ಘೋರತೆ ಅದಷ್ಟು ಕಡಮೆಯಾಗಿರಲಿ. ಹೆಚ್ಚು ಹೇಳಬೇಕಾದ್ದಿಲ್ಲ, ಮಾಲಿನಿ. ನಾನು ಬರುತ್ತೇನೆ" ಎಂದು ಹೊರಡಲನುವಾದೆ.

"'ಹಾಗಾದರೆ ಮತ್ತೆ ಬರುವುದೇ ಇಲ್ಲವೇ?' ಎಂದು ದೈನ್ಯದಿಂದ ಬೇಡಿದಳು.

" ಖಂಡಿತ ಸಾಧ್ಯವಿಲ್ಲ" ಎಂದೆ ನಾನು.

" ನಿಮ್ಮ ನೆನಪಿಗಾಗಿ ಏನಾದರೂ...." ಎಂದು ಬೇಡಿದಳು.

" ನನಗೆ ಏನೋ ಹೊಳೆಯಿತು. ಹುಚ್ಚು ಹಿಡಿದಂತಾಯಿತು. ಎರಡು ಶಕ್ತಿಗಳ ಸಮಾನ ಬಲದ ಸೆಳೆತಕ್ಕೆ ಸಿಕ್ಕಿ ದಿಕ್ಕುಕಾಣದೆ ನಿಂತಲ್ಲಿ ನಿಂತೆ. ಆತ್ಮ ಬಲವನ್ನೆಲ್ಲಾ ಉಪಯೋಗಿಸಿ ನಿರ್ಧರಮಾಡಿ, ನನ್ನಲ್ಲಿ ಏನೂ ಇಲ್ಲ. ಏನನ್ನೂ ಬಯಸಬೇಡ. ಸಾಧ್ಯವಿಲ್ಲ. ಕೂಡದು' ಎಂದು ಬಡಬಡನೆ ಹೇಳಿ ದಡದಡನೆ ಹೊರಟು ಬಂದೆ. 'ಗೆದ್ದೆ' ಎಂದುಕೊಂಡೆ. ಆದರೆ, ನಿಜವಾಗಿ ಸೋತಿದ್ದೆ; ಸೋತುಹೋಗಿದ್ದೇನೆ. ಮಾಲಿನಿಯನ್ನು ಮರೆಯುವುದು ಅಸಾಧ್ಯವೆಂದು ತೋರುತ್ತಿದೆ. ಅವಳನ್ನು ಮರೆಯುವುದು ಹೇಗೆ ಎನ್ನುವುದೆ ಈಗ ನನ್ನ ಸಮಸ್ಯೆ ಯಾಗಿದೆ" ಎಂದು ನಾಗಭೂಷಣ ತನ್ನ ಅನುಭವವನ್ನು ಹೇಳಿ ಮುಗಿಸಿದ.

ನಾಗಭೂಷಣ ಮಾಲಿನಿಯನ್ನು ಮರೆಯಲು ನಿಜವಾಗಿ ಪ್ರಯತ್ನಿಸಿದ. ಆದರೆ ಸಾಧ್ಯವಾಗಲಿಲ್ಲ. ಸಂದರ್ಭ ಸಿಕ್ಕಿದಾಗಲೆಲ್ಲ ನನ್ನೊಡನೆ ಮಾಲಿನಿಯ ಮಾತೆತ್ತುತ್ತಿದ್ದ. ಅವಳನ್ನು ಮತ್ತೆ ಕಾಣಲು ತನಗೆ ಅವಕಾಶ ಲಭಿಸೀತೆ, ಅವಳು ತನ್ನ ಮಾತು ಮೀರಿ ತನಗೆ ಒಂದು ಕಾಗದ ಬರೆದಾಳೇ ಎಂದು ಕಾತರಿಸುತ್ತಿದ್ದ. ತನ್ನ ಹಾಗೆಯೇ ಮಾಲಿನಿ ತನಗಾಗಿ ಎಷ್ಟು ಪರಿತಪಿಸು ತ್ತಿರುವಳೋ ಎಂದು ಬೇಗುದಿಗೊಳ್ಳುತ್ತಿದ್ದ. ಅನೇಕ ತಿಂಗಳುಗಳಾದರೂ ಮಾಲಿನಿಯಿಂದ ಅವನಿಗೆ ಯಾವ ಕಾಗದವೂ ಬರಲಿಲ್ಲ.

ಒಂದು ದಿನ ಅವನು ನನ್ನ ಕೊಠಡಿಗೆ ಬಹು ಉದ್ವೇಗದಿಂದ ಬಂದ. ಅವನ ಕೈಲಿ ಒಂದು ಕವರಿತ್ತು. ಬಹುಶಃ ಮಾಲಿನಿಯ ಕಾಗದವಿರಬಹು ದೆಂದು ಊಹಿಸಿದೆ. ಅದನ್ನವನು ನನ್ನ ಕೈಗೆ ಕೊಟ್ಟ. ಅವನ ಕೈ ನಡುಗುತ್ತಿತ್ತು. ನಾನು ಅಂಟಿಸಿಲ್ಲದ ಕವರನ್ನು ತೆರೆದು ನೋಡಿದೆ. ಅದರೊಳಗೆ ಇದ್ದದ್ದು ಪತ್ರವಲ್ಲ, ವೃತ್ತಪತ್ರಿಕೆಯೊಂದರ ಒಂದು ತುಂಡು: 'ಸುಪ್ರಸಿದ್ಧ ಜಮೀನ್ದಾರ ರಾದ ರಾಜಾರಾಯರ ಧರ್ಮಪತ್ನಿಯವರ ಆತ್ಮಹತ್ಯೆ' ಎಂಬ ಶಿರೋನಾಮದ ಕೆಳಗೆ ಮಾಲಿನಿಯ ಸಾವಿನ ಸುದ್ದಿಯನ್ನು ಒಳಕೊಂಡಿತ್ತು.

" ಮಾಲಿನಿಯ ಸಮಸ್ಯೆಯನ್ನು ನಾನು ಪರಿಹರಿಸಲಾಗಲಿಲ್ಲ. ವಿಧಿ ಪರಿಹರಿಸಿತು" ಎಂದು ನುಡಿದ ನಾಗಭೂಷಣ.

" ಧರ್ಮಕ್ಕೆ ಬಲಿ" ಎಂದೆ ನಾನು.

# ಸಿಗರೇಟಿನ ತುಂಡು

---

ಸುಬ್ಬುಕೃಷ್ಣ ಸಂಜೆ ಮನೆಗೆ ಬಂದ ಕೂಡಲೆ ಸುವಾಸಿತ ವಾತಾವರಣ ಅವನನ್ನು ಸ್ವಾಗತಿಸಿತು. ಅವನಿಗೆ ಆಶ್ಚರ್ಯವಾಯಿತು! ಎಂದೋ ಉಗಾದಿ ದೀವಳಿಗೆಗಳಲ್ಲಿ ದೇವರ ಪೂಜೆಯ ಶಾಸ್ತ್ರವಿಟ್ಟುಕೊಂಡಿದ್ದ ಅವನು ಮನೆಯಲ್ಲಿ ಎಂದೂ ಊದಿನ ಬತ್ತಿಯ ದಾಸ್ತಾನು ಇಟ್ಟವನಲ್ಲ. ಹೊಸದಾಗಿ ಸಂಸಾರ ಹೂಡಿದವನಾದರೂ, ರಸಿಕ ಮನೋಭಾವವುಳ್ಳವನೇ ಆವರೂ, ಇಂದಲ್ಲ ನಾಳೆ ಪ್ರಿಯ ಪತ್ನಿಯ ನಾನಾ ಬಗೆಯ ಇಷ್ಟಾರ್ಥಗಳನ್ನು ನೆರವೇರಿಸಲು ಸಮರ್ಥ ನಾಗಬೇಕೆಂಬ ಹೆಬ್ಬಯಕೆಯುಳ್ಳವನಾಗಿದ್ದರೂ, ಯಾವುದೋ ಇನ್‌ಷ್ಯೂರೆನ್ಸ್ ಕಂಪೆನಿಯಲ್ಲಿ ಟೈಪಿಸ್ಟ್ ಆಗಿದ್ದ ಅವನು, ಹೆಂಡತಿಯ ಮುಡಿಗೆ ಹೂವು ಅಡಿಗೆ ಚಪ್ಪಲಿ ಇವುಗಳನ್ನು ತರಲು ಹಿಂದೆ ಮುಂದೆ ನೋಡುತ್ತಿದ್ದ ಸುಬ್ಬುಕೃಷ್ಣ, ತನ್ನ ದಿನಚರಿಯ ಪ್ರೇಮಲೀಲೆಗಳಿಗೋಸ್ಕರ 'ಪ್ರೇಮಲೀಲಾ' ಊದಿನಬತ್ತಿ ಯನ್ನು ತರಿಸಿಡುವಷ್ಟು ಅವಿವೇಕಿಯಾದ ಅತಿರಸಿಕನಾಗಿರಲಿಲ್ಲ.

ಆದ್ದರಿಂದ ಅವನಿಗೆ ಆಶ್ಚರ್ಯ: ಎಂದೂ ಇಲ್ಲದ್ದು ಇದೇನು ಇಂದು ಊದಿನ ಬತ್ತಿಯ ಕಂಪಿನ ಬಳ್ಳಿ ಮನೆಯೊಳಗೆಲ್ಲಾ ಹಾಗೆ ಹೀಗೆ ಹಬ್ಬಿ ಹರಡಿ ಪರಿಮಳವನ್ನು ಪಸರಿಸುತ್ತಿದೆ ಎಂದು! ಹಜಾರದ ನಾಲ್ಕೂ ಮೂಲೆಗಳಲ್ಲಿ ಅವಕಾಶವಿದ್ದ ಕಡೆಗಳಲ್ಲೆಲ್ಲಾ ಸುಮಾರು ಹತ್ತು ಹನ್ನೆರಡು ಊದಿನ ಬತ್ತಿಗಳು ಮುಕ್ಕಾಲು ಪಾಲೆಲ್ಲ ಉರಿದು ಕೆಳಗೆ ಬೂದಿಯುದುರಿಸಿದ್ದುವು.

ಸುಪ್ರಸನ್ನನಾಗಿಯೇ ಒಳಹೊಕ್ಕಿದ್ದನು ಸುಬ್ಬುಕೃಷ್ಣ. ಗಂಡನ ನಗೆ ಮೊಗವನ್ನು ಕಂಡು ಸರಸಮ್ಮ ಸುಪ್ರೀತಳಾದಳು, ಸಂತಸಗೊಂಡಳು; ನಿಶ್ಚಿಂತೆಗೊಂಡಳು, ನಲವೇರಿದಳು.

"ಬನ್ನಿ ಒಳಕ್ಕೆ, ಕಾಫಿ ತಿಂಡಿ ಎಲ್ಲ 'ರೆಡಿ.' ನೀವೂ ನಿತ್ಯಕ್ಕಿಂತ ಅರ್ಧ ಗಂಟೆ ಮುಂಚೆ ಬಂದಿದ್ದೀರಿ ಇವೊತ್ತು ; ನಾನೂ ಅದೇ ಹೊತ್ತಿಗೆ ಸರಿಯಾಗಿ ಎಲ್ಲ ಸಿದ್ಧಮಾಡಿಟ್ಟುಬಿಟ್ಟಿದ್ದೀನಿ. ಇಬ್ಬರ ಮನಸ್ಸೂ ಹೀಗೆ ಕೂಡೋದು ಅಪರೂಪ ಅಲ್ಲವೆ, ಅಂದ್ರೆ?" – ಸಂಭ್ರಮದಿಂದ ನುಡಿದಳು ಸರಸಮ್ಮ.

" ಇದನ್ನೆ ಇಂಗ್ಲಿಷಿನಲ್ಲಿ Coincidence (ಕೊಯಿನ್ಸಿಡೆನ್ಸ್) ಅನ್ನುವುದು...."

" ಅಂದರೆ ?"

" ಕಾಕತಾಳೀಯ ಅಂತರಾಲ್ಲ, ಅದು."

" ಓಹೋ, ನೀವೂ ವಾಕಿಂಗಿಗೋ ಸಿನಿಮಾಕ್ಕೋ ಹೋಗೋಣ ಅಂತಲೇ ಮನಸ್ಸಿನಲ್ಲಿ ಮಾಡಿಕೊಂಡಿರುವುದು, ನಾನೂವೆ ಅದಕ್ಕೆ ಸಿದ್ಧವಾಗಿ...."

" ....ಅಲಂಕಾರ ಗಿಲಂಕಾರ ಮಾಡಿಕೊಂಡಿರುವುದು...."

" ಅಲಂಕಾರವೇನು ಗಿಲಂಕಾರ ?"

" ಸೊಗಸಾದ ಮಲ್ಲಿಗೆ ಹೂವು ಗುಲಾಬಿ ಹೂವು ಮುಡಿದಿದ್ದೀ, ನುಸಿ ಹಿಡಿಸುತ್ತ ಇದ್ದ ಬನಾರಸ್ ಸಿಲ್ಕ್ ಸೀರೆಯನ್ನ ಹೊರಕ್ಕೆ ತೆಗೆದು ಉಟ್ಟು ಬಿಟ್ಟಿದ್ದೀ, ಮೈಸೂರು ಜಾರ್ಜೆಟ್ಟಿನ ಬ್ಲೌಸ್ ತೊಟ್ಟುಬಿಟ್ಟಿದ್ದೀ ?.... ಸಾಲದೆ, ಅಲಂಕಾರ ? ಇದೇನು, ಮನೆಯೆಲ್ಲಾ ಘಮಘಮಾಯಿಸ್ತಿದೆ ? ಅದೇನು ' ಪ್ಲ್ಯಾನು ', ನನ್ನನ್ನ ಪುಸಲಾಯಿಸುವುದಕ್ಕೆ ?"

ಸರಸಮ್ಮಾ ಸ್ಟೈಯ್ನ್‌ಲೆಸ್ ಸ್ಟೀಲ್ ತಟ್ಟೆಯಲ್ಲಿ ಗರಿಗರಿಯಾಗಿದ್ದ ಆಲೂಗಡ್ಡೆ ಉಪ್ಪೇರಿಯನ್ನೂ, ಒಂದು ಹಲ್ಲೆ ಮೈಸೂರು ಪಾಕನ್ನೂ, ಒಂದು ಪಚ್ಚೆ ಬಾಳೆಯ ಹಣ್ಣನ್ನೂ ಅಣಿಗೊಳಿಸಿ, ಕೋಟು ಕಳಚಿ ಕೈಕಾಲು ತೊಳೆದು ಕೊಂಡು ಅಡುಗೆಯ ಮನೆಯೊಳಕ್ಕೆ ಬಂದ ಗಂಡನ ಕೈಗೆ ಕೊಟ್ಟಳು.

ಸುಬ್ಬುಕೃಷ್ಣ ಒಂದೆರಡು ಉಪ್ಪೇರಿಯನ್ನು ಬಾಯಿಗೆ ಹಾಕಿಕೊಂಡು, ತಿನ್ನುತ್ತ ನಿಂತೇ ಇದ್ದ.

" ಕೂತುಕೊಂಡು ತಿನ್ನಬಾರದೆ ?"

" ಪಾಪ, ನೀನು ಕಷ್ಟಪಟ್ಟು ಕಾಸು ಖರ್ಚುಮಾಡಿ ಊದಿನ ಬತ್ತಿ ಹೊತ್ತಿಸಿಟ್ಟಿದ್ದೀಯೆ ; ಅದು ಘಮಘಮಾಯಿಸುವ ಕಡೆಯೇ ಹೋಗಿ ಕುಳಿತು ತಿನ್ನೋಣ."

" ನಿಮಗೋಸ್ಕರವೇ ಅಂತಿಟ್ಟುಕೊಳ್ಳಿ. ಇನ್ನೊಂದು ಐದು ನಿಮಿಷ ತಡವಾಗಿ ಹೊತ್ತಿಸಿಟ್ಟಿದ್ದರೆ ಚೆನ್ನಾಗಿತ್ತು ; ಇನ್ನೂ ಉರೀತಾನೇ ಇರುತ್ತಿತ್ತು. ಈಗೆಲ್ಲಾ ಉರಿದು ಮುಗಿದು ಹೋಗಿದೆ."

"ಆದರೇನು, ಪರವಾಯಿಲ್ಲ. ಮನೆಯೆಲ್ಲಾ ಇನ್ನೂ ಘಮಘಮಾಯಿಸ್ತಾನೆ ಇದೆ" ಎನ್ನುತ್ತಾ, ತಿನ್ನುತ್ತಾ, ಸುಬ್ಬುಕೃಷ್ಣ ತನ್ನ ಕೊಟಡಿಗೆ ಬಂದು ಮೇಜಿನ ಮೇಲೆ ತಿಂಡಿಯ ತಟ್ಟೆಯನ್ನಿಟ್ಟು ಕುರ್ಚಿಯ ಮೇಲೆ ಕುಳಿತುಕೊಂಡನು. ಕೊಟಡಿಯಲ್ಲಿ ಊದಿನ ಕಡ್ಡಿ ಹೊತ್ತಿಸಿಟ್ಟಿರದಿದ್ದರೂ, ಹಜಾರದಲ್ಲಿನ ಕಂಪನ್ನು ಗಾಳಿ ಇಲ್ಲಿಗೂ ಹೊತ್ತು ತರುತ್ತಿತ್ತು.

ಕಂಪಿನೊಂದಿಗೆ ಇಂಪು ನುಡಿಗಳನ್ನು ನುಡಿಯುತ್ತ ಬಳುಕುತ್ತ ಸರಸಮ್ಮನೂ ಹಿಂಬಾಲಿಸಿದಳು ; ಮೋಹಕ ಭಂಗಿಯಲ್ಲಿ ಬಾಗಿಲೊರಗಿ ನಿಂತಳು.

"ನೀನು ತಿಂದಾಯಿತೋ ಇಲ್ಲವೋ?"

"ಇದೇನು ಅಂದ್ರೆ ಹೀಗೆ ಕೇಳುತ್ತೀರಿ?"

"ಹಾಗಾದರೆ ನಿನ್ನ ತಟ್ಟೆಯನ್ನೂ ತೆಗೆದುಕೊಂಡು ಬಾ, ಇಬ್ಬರೂ ಒಟ್ಟಿಗೆ ತಿನ್ನೋಣ...."

"ನೀವು ಹೇಳುವುದೂ ದಿಟವೆ, ತರುತೀನಿ ; ಇಲ್ಲದೆ ಹೋದರೆ ಹೊತ್ತಾಗುತ್ತೆ...."

"ಹೊತ್ತಾಗುತ್ತೆ? ಎಲ್ಲಿಗೆ, ಏನು ಕಥೆ?"

"ಕಥೆ ಸಿನಿಮಾಕ್ಕೆ ಹೋದಮೇಲೆ ತಾನೆ?"

"ಇವೊತ್ತು ಮನೆಯಲ್ಲೆ ಕಥೆ. ಮರೆತುಬಿಟ್ಟೆಯೋ ಇವೊತ್ತು ಮಾಸಾಂತ್ಯ ಅನ್ನೋದನ್ನ?"

"ದಾರಿಯಲ್ಲಿ ಮಾತನಾಡೋಣ ಬೇಗ ಬೇಗ ತಿಂದು ಏಳಿ ಅಂದ್ರೆ. ನೀವೇನೂ ದುಡ್ಡು ಖರ್ಚು ಮಾಡಬೇಕಾಗಿಲ್ಲ...."

"ನಾನೇನೂ ಖರ್ಚು ಮಾಡಬೇಕಾಗಿಲ್ಲ! ಹೆಂಡತಿ ಗಂಡನ್ನ ಸಿನಿಮಾಕ್ಕೆ ಕರೆದುಕೊಂಡು ಹೋಗೋದು! ಭೇಷ್ ಅಂದೆ! ಬಹಳ ಚೆನ್ನಾಗಿದೆ. ಸಾಸವೆ ಡಬ್ಬವನ್ನೋ ಕುಂಕುಮದ ಭರಣಿಯನ್ನೋ ಹುಡುಕಿ ನಾಲ್ಕಾಣೆಯೋ ಎರಡಾಣೆಯೋ ಇದ್ದರೆ ಕೊಡು ಅಂತ ನಿನ್ನ ಕೇಳಿದ್ದಕ್ಕೆ ಇಲ್ಲ ಅಂದೆ! ಇವೊತ್ತು ಎಲ್ಲಿ ಬಂತು ಇಷ್ಟೊಂದು ದುಡ್ಡು? ಹೂವು, ಬಾಳೆಯ ಹಣ್ಣು, ಊದಿನ ಕಡ್ಡಿ, ಆಲೂಗಡ್ಡೆ, ತುಪ್ಪ ಇಲ್ಲ ಅಂದೆ ಆದರೂ ಮೈಸೂರು ಪಾಕು, ಸಾಲದು ಅಂತ ನಿನ್ನ ಖರ್ಚಿನಲ್ಲೆ ಸಿನಿಮಾ ಬೇರೆ, ಜೊತೆಗೆ ಬಸ್ ಚಾರ್ಜು....ಅಬ್ಬಾ! ಏನು ಸಾಲವೋ ಸಂಪಾದನೆಯೋ....?"

"ನೋಡಿ, ಹಾಗೆಲ್ಲಾ ಬೆದಕಿ ಕೇಳಬೇಡಿ, ಇದೆಲ್ಲಾ ಹೆಂಗಸರ ಗುಟ್ಟು. ಗಂಡಸರಿಗೆ ಅದನ್ನ ಹೇಳುವುದೂ ಇಲ್ಲ, ಗಂಡಸರು ಕೇಳಲೂ ಬಾರದು."

ನಗುತ್ತಲೇ ನುಡಿದ ಸುಬ್ಬುಕೃಷ್ಣ :

" ಗಳಿಸುವುದಕ್ಕೆ ಗಂಡಸಿಗೆ ಒಂದೇ ಮಾರ್ಗ, ಹೆಂಗಸಿಗೆ ಹಲವಾರು ಮಾರ್ಗ, ಅಲ್ಲವೆ ?

" ಥೂ, ಹೋಗಿ ಅಂದ್ರೆ. ಏನೇನೋ ಆಡುತ್ತೀರ."

ಸರಸಮ್ಮ ಕಾಫಿ ತರಲು ಒಳಕ್ಕೆ ಹೋದಳು. ಸುಬ್ಬುಕೃಷ್ಣ ತಿಂಡಿ ತಿಂದು ಮುಗಿಸಿ, ಬಾಳೆಯ ಹಣ್ಣನ್ನು ತಿಂದು, ಸಿಪ್ಪೆಯನ್ನು ಹೊರಕ್ಕೆ ಎಸೆಯಲು ಹೋದ. ಹೊರಗಡೆ ಬಾಗಿಲ ಬಳಿ ಆಗಲೇ ಬಿಸಾಡಿದ್ದ ಬಾಳೆಯ ಹಣ್ಣಿನ ಸಿಪ್ಪೆಯೊಂದು ಅವನ ದೃಷ್ಟಿಗೆ ಬಿದ್ದಿತು. ಹೆಂಡತಿಯೊಡನೆ ಪರಿಹಾಸಕ್ಕೆ ಮತ್ತೊಂದು ಪದಾರ್ಥ ದೊರೆಯಿತು. ಅವನು ಹಿಂತಿರುಗುವ ಹೊತ್ತಿಗೂ ಸರಸಮ್ಮ ಕಾಫಿಯ ಲೋಟವನ್ನು ಹಿಡಿದುಕೊಂಡು ಬರುವ ಹೊತ್ತಿಗೂ ಸರಿಹೋಯಿತು.

" ನೀನು ತಿಂದಾಯಿತೆ ಎಂದು ಕೇಳಿದ್ದಕ್ಕೆ ಅಸಮಾಧಾನ ಪಟ್ಟೆ ? ಬಾಳೆಯ ಹಣ್ಣು ಮಾತ್ರ ತಿಂದೆಯೇನೋ ?" – ಸುಬ್ಬುಕೃಷ್ಣ ಕೇಳಿದ.

" ಇಲ್ಲವಲ್ಲ !" ಎಂದು ಹೇಳಬೇಕು ; ಅಷ್ಟರಲ್ಲಿಯೇ ಆವಳಿಗೆ ಏನೋ ಹೊಳೆದು, " ಬೀದಿಯ ಮೇಲೆ ಬಾಳೆಯ ಹಣ್ಣು ಮಾರುವುದಕ್ಕೆ ಬಂದಿತ್ತು, ಚೆನ್ನಾಗಿತ್ತು. ಕರೆದು ವ್ಯಾಪಾರ ಮಾಡಿದೆ. ಅಗ್ಗವಾಗಿ ಕೊಡಲಿ ಅಂತ, ಹಣ್ಣಾಗಿಲ್ಲ ಕಾಯಿ, ಎಂದೆ. ತಿಂದು ನೋಡಿ ಅಂತ ಬಲವಂತ ಮಾಡಿ ಒಂದು ಹಣ್ಣು ಕೊಟ್ಟುಬಿಟ್ಟ. ಅದನ್ನ ತಿಂದು ಸಿಪ್ಪೆ ಅಲ್ಲೇ ಹಾಕಿದ್ದೆ. ಏನೋ ಅಂತಿದ್ದೆ, ನಿಮ್ಮ ಮೆದುಳು ತುಂಬ ಚುರುಕು " ಎಂದು ಕಾಫಿಯನ್ನು ಮೇಜಿನ ಮೇಲಿಟ್ಟು, " ನೀವು ಬಟ್ಟೆ ಗಿಟ್ಟೆ ಹಾಕಿಕೊಳ್ಳಿ. ಅಷ್ಟು ಹೊತ್ತಿಗೆ ನಾನೂ ತಿಂಡಿ ಕಾಫಿ ಮುಗಿಸಿ ಬಂದು ಬಿಡುತೀನಿ " ಎಂದು ಸಂಭ್ರಮವನ್ನು ನಟಿಸುತ್ತ ತೇಲಿ ಹೋದಳು. ಆ ಒಂದು ಕ್ಷಣದಲ್ಲಿ ಅವಳು ತನ್ನ ಭಂಗಿಯಿಂದಲೇ ಸುಬ್ಬುಕೃಷ್ಣನ ಮನಸ್ಸನ್ನು ಕವರಿಬಿಟ್ಟಿದ್ದಳು : ಅವಳಿಗೂ ಆ ಅರಿವಿತ್ತು.

× × × ×

ಸುಬ್ಬುಕೃಷ್ಣನ ಮೆದುಳು ಮಾತ್ರವಲ್ಲ, ಅವನ ಮೂಗೂ ಬಲು ಚುರುಕು. ಸರಸಮ್ಮ ತನ್ನ ರೂಪು ರಚನೆ ಹಾವಭಾವ ವಿಲಾಸಗಳಿಂದ ಮಾತ್ರವಲ್ಲದೆ ರುಚಿ ರುಚಿಯಾಗಿ ಅಡುಗೆ ತಿಂಡಿ ಮಾಡುವುದರಲ್ಲಿಯೂ ನಿಪುಣೆಯಾಗಿ ತನ್ನ ಪಾಕನೈಪುಣ್ಯದಿಂದಲೂ ಅವನ ಮನಸ್ಸನ್ನು ರಮಿಸುತ್ತಿದ್ದಳು. ಹೆಂಡತಿಯಾದವಳು ಎಷ್ಟೇ ರೂಪವತಿಯಾಗಿರಲಿ, ಬಡ ಸಂಸಾರವಾದರೆ, ಅವಳು ಪಾಕಕುಶಲೆಯೂ ಆಗಿಲ್ಲದೆ ಹೋದ ಪಕ್ಷದಲ್ಲಿ, ಅನ್ಯೋನ್ಯ ದಾಂಪತ್ಯ ಸಿದ್ಧಿಸುವುದಿಲ್ಲ. ಅವಳ ರಸಪಾಕದ ರುಚಿಸಿದ್ಧಿಯನ್ನು ವಿಮರ್ಶಿಸುವುದರಲ್ಲಿ ಸುಬ್ಬುಕೃಷ್ಣ ಬಹು ಗಟ್ಟಿಗ. ಇಂದು ಮೈಸೂರು ಪಾಕಿನ ತಯಾರಿಕೆಯಲ್ಲಿ ತುಪ್ಪದೊಂದಿಗೆ ಅಪ್ಪಟ ಕಡಲೆಕಾಯೆಣ್ಣೆ ಬೆರಸಿದ್ದುದನ್ನು ಕಂಡುಹಿಡಿಯಲು ಅಂತಹ ಪ್ರಚಂಡ ರಸಿಕನ ಚುರುಕಾದ ಘ್ರಾಣಶಕ್ತಿಯೂ ಅಸಮರ್ಥವಾಗಿತ್ತು. ಅದು ಅಷ್ಟು ಅತಿ ಚುರುಕಾಗಿದ್ದುದೇ ಅದಕ್ಕೆ ಕಾರಣ!

ಕ್ರಮ ಕ್ರಮೇಣ ಕ್ಷೀಣಿಸುತ್ತಿದ್ದ ಊದಿನ ಬತ್ತಿಯ ಪರಿಮಳ ಹಿಂಗುತ್ತ ಬಂದಂತೆಲ್ಲ, ಅಧಿಕ ಪುಣ್ಯವೆಲ್ಲ ಕ್ಷಯಿಸಿದ ಮೇಲೆ ಉಳಿಯುವ ಪಾಪಶೇಷದಂತೆ ಅಪೇಕ್ಷಣೀಯವಲ್ಲದ ಒಂದು ಅಡ್ಡವಾಸನೆಯನ್ನು ಅವನ ಚುರುಕಾದ ಮೂಗು ಕಂಡುಹಿಡಿದುಬಿಟ್ಟಿತ್ತು. ಇದೇನು ವಾಸನೆ, ಊದಿನ ಬತ್ತಿಯಲ್ಲಿ ಹೊಗೆಯಸೊಪ್ಪು ಸೇರಿಸುತ್ತಾರೆಯೆ! ಎಂದು ಅವನು ಆಶ್ಚರ್ಯದ ಪರಿಭಾವನೆಯಲ್ಲಿ ಕೆಲವು ಕ್ಷಣಗಳನ್ನು ಕಳೆದನು. ಕ್ಷಣ ಕ್ಷಣ ಕಳೆದಂತೆ, ಇಲಿ ಸತ್ತ ವಾಸನೆ ಕಡೆಗೂ ಸತ್ತ ಇಲಿಯ ಕಡೆಗೆ ಸೆಳೆದೊಯ್ಯುವಂತೆ, ಆ ಅಡ್ಡವಾಸನೆ ಸಿಗರೇಟಿನ ವಾಸನೆಯೇ ಎಂದು ಅವನಿಗೆ ಖಚಿತವಾಗಿ, ಅದರ ಮೂಲ ಎಲ್ಲಿ ಎಂಬ ತರ್ಕಕ್ಕೆ ತೊಡಗಿತು ಅವನ ಚುರುಕು ಮೆದಳು. ಪತ್ನೀಪ್ರಶಂಸೆಗೆ ಪಾತ್ರವಾಗಿದ್ದ ಅವನ ದುರದೃಷ್ಟಶಾಲಿಯಾದ ಮಸ್ತಿಷ್ಕ!

ಅನೇಕ ವೇಳೆ ಕೇವಲ ತರ್ಕ ವಿತರ್ಕಗಳಿಂದ ಸತ್ಯ ಸಾಕ್ಷಾತ್ಕಾರವಾಗುವುದಿಲ್ಲ; ಅದಕ್ಕೆ ಪ್ರತ್ಯಕ್ಷ ಪ್ರಮಾಣವೇ ಅವಶ್ಯವಾಗುತ್ತದೆ. ಅವನ ಕುತೂಹಲವನ್ನು ತೀವ್ರವಾಗಿ ಕೆರಳಿಸಿದ್ದ ಆ ಪ್ರತ್ಯಕ್ಷ ಪ್ರಮಾಣವು, ಹುಡುಕುತ್ತಿದ್ದ ಮೂಲಿಕೆಯ ಬಳ್ಳಿಯೇ ಕಾಲಿಗೆ ತೊಡರಿಕೊಂಡಂತೆ, ಅಕಸ್ಮಾತ್ತಾಗಿ ಅವನ ದೃಷ್ಟಿಗೆ ಬಿದ್ದಿತು. ಮೇಜಿನ ಕೆಳಗೆ ಬಿದ್ದಿದ್ದ ಉಪ್ಪೇರಿಯ ಹಲ್ಲೆಯೊಂದನ್ನು

ಬಿಸಾಡಲು ಕೈಗೆತ್ತಿಕೊಳ್ಳಲು ಬಗ್ಗಿದಾಗ, ಉರಿಸಿ ಆರಿಸಿ ಎಸೆದಿದ್ದ ಸಿಗರೇಟಿನ ತುಂಡೊಂದು ಅವನ ಚುರುಕು ನೋಟಕ್ಕೆ ಬಿದ್ದಿತು.

ಈಗಲೀಗ ಸುಬ್ಬುಕೃಷ್ಣನ ತರ್ಕಬುದ್ಧಿ ಮೇಲುಗೈಯಾಯಿತು; ಬೆಂಕಿಯಿಲ್ಲದೆ ಹೊಗೆಯಿಲ್ಲ; ಹೊಗೆ ಕಂಡ ಬಳಿ ಬೆಂಕಿಯಿದ್ದೇ ತೀರಬೇಕು. ಸಿಗರೇಟಿನ ಹೊಗೆ ಈಗ ಮಾಯವಾಗಿ ಬಹು ಹೊತ್ತಾಗಿದ್ದರೂ, ಅದು ಬಳುವಳಿಯಾಗಿ ಬಿಟ್ಟು ಹೋಗಿರುವ ವಾಸನೆ ಊದಿನ ಬತ್ತಿಯ ಅಪಾರ ಪರಿಮಳದಿಂದ ಹಜಾರದಲ್ಲಿ ನಾಶವಾಗಿದ್ದರೂ, ಈ ಕೋಣೆಯಲ್ಲಿ ಚುರುಕು ಮೂಗಿಗೆ ಗೊತ್ತಾಗುವ ಮಟ್ಟಿಗೆ ಉಳಿದಿದೆ. ಕಾರಣ, ಇಲ್ಲಿ ಊದಿನ ಕಡ್ಡಿ ಹಚ್ಚಿಯೇ ಇಲ್ಲ. ಸಿಗರೇಟು ಸೇದಿದಾತ ಹಜಾರದಲ್ಲಿಯೇ ಕುಳಿತು ಬಹು ಹೊತ್ತು ಸಿಗರೇಟು ಸೇದಿದ್ದಾನೆ. ಅವನು ಈ ಕೊಟಡಿಗೆ ಬಂದು ಕುಳಿತು ಕಡೆಯ ಸಲ ಒಂದೆರಡು ಸೇದು ಸೇದಿ, ಉಳಿದ ಸಿಗರೇಟಿನ ತುಂಡನ್ನು ಮರೆತೋ ಅಭ್ಯಾಸ ಬಲದಿಂದಲೋ ಮೇಜಿನ ಕೆಳಗೆ ಹಾಕಿಬಿಟ್ಟಿದ್ದಾನೆ. ಸಿಗರೇಟಿನ ತುಂಡು ಇಲ್ಲಿ ಬಿದ್ದಿರುವುದರಿಂದ, ಸಿಗರೇಟು ಸೇದಿದಾತನೊಬ್ಬನು ಇಲ್ಲಿ ಬಂದು ಕುಳಿತಿರಲೇ ಬೇಕು. ಇದು ಶತಸ್ಸಿದ್ಧ.

ಅವನು ಯಾರು ?

ನನ್ನ ಸ್ನೇಹಿತನೆ ? ನನಗಾಗಿ ಕಾಯುತ್ತಿದ್ದಿರಬಹುದೆ ? ನನ್ನ ಸ್ನೇಹಿತನಾಗಿದ್ದರೆ ನನಗೆ ತಿಳಿಸದಿರುತ್ತಿದ್ದಳೆ ? ಅಲ್ಲ. ನನ್ನ ಸ್ನೇಹಿತನಲ್ಲ.

ಹಾಗಾದರೆ ಅವನು ಯಾರು, ಯಾರು ?

ಅವಳ ಸ್ನೇಹಿತ! ಇದು ಬಹು ಮರ್ಯಾದೆಯ ಮಾತಾಯಿತು. ಗಂಡನಿಲ್ಲದ ವೇಳೆಯಲ್ಲಿ ಬಂದಿದ್ದ—! ಥೂ, ಥೂ, ಹೀಗೂ ಉಂಟೆ ? ಯಾಕಿರಬಾರದು ? ಹೂವು, ಗಂಧದ ಕಡ್ಡಿ, ಬಾಳೆಯ ಹಣ್ಣು, ಉಪ್ಪೇರಿ, ಮೈಸೂರು ಪಾಕು, ಮೇಲೆ ಕೈಗೆ ದಕ್ಷಿಣೆ! ಬಡ ಟೈಪಿಸ್ಟಿನ ಹೆಂಡತಿಯ ಮೇಲು ಸಂಪಾದನೆ! ಯಾಕಿರಬಾರದು ?

ಸುಬ್ಬುಕೃಷ್ಣ ಸಿಗರೇಟಿನ ತುಂಡನ್ನು ಮೆಲ್ಲನೆ ತುದಿ ಬೆರಳುಗಳಿಂದ ಎತ್ತಿಕೊಂಡು, ಒಂದು ಕಾಗದದ ಚೂರಿನಲ್ಲಿ ಪೊಟ್ಟಣ ಕಟ್ಟಿ, ಅದನ್ನು ಮೇಜಿನ ಮೇಲಿಟ್ಟ. ಕೆಲವು ನಿಮಿಷಗಳ ಹಿಂದೆ ಅವನಾಡಿದ ನಗೆನುಡಿ—'ಗಳಿಸುವುದಕ್ಕೆ ಗಂಡಸಿಗೆ ಒಂದೇ ಮಾರ್ಗ, ಹೆಂಗಸಿಗೆ ಹಲವಾರು ಮಾರ್ಗ'—

ತಟ್ಟನೆ ನೆನಪಿಗೆ ಬಂದು, ಅವನನ್ನೆ ನಗೆಯಾಡತೊಡಗಿತು ; ನಿಷ್ಠುರ ಸತ್ಯವಾಗಿ ತೋರತೊಡಗಿತು. ಅದನ್ನೆದುರಿಸಲು ಅವನು ಸಿದ್ಧನಾದ.

ಅವನ ಮೈಯೆಲ್ಲ ಕೆಂಡವಾಗಿ ಉರಿಯತೊಡಗಿತು ; ಕಂಪಿಸತೊಡಗಿತು.

" ಬಾರೇ ಇಲ್ಲಿ " ಎಂದು ಕನಲಿ ಕಿರಿಚಿದ ಸುಬ್ಬುಕೃಷ್ಣ. ಅವನು ಎಂದೂ ಹೆಂಡತಿಯನ್ನು ' ಹೋಗೇ ಬಾರೇ ' ಎಂದು ಕರೆದುದಿಲ್ಲ. ಏಕ ವಚನವೇ ಆದರೂ ' ಹೋಗು ಬಾ ' ಎಂಬ ಮಾತುಗಳ ಉಚ್ಚಾರಣೆಯ ಮೆಲುಪಿನಲ್ಲಿ ಒಲವೇ ಸೂಸುತ್ತಿತ್ತು. ಈಗ ಬೇರೆಯ ಗತ್ತಿನಲ್ಲಿ ಗುಡುಗಿಬಂದ ಅವೇ ನುಡಿಗಳಲ್ಲಿ ಕೋಪ ಸಿಡಿಸಿಡಿಗುಟ್ಟುತ್ತಿತ್ತು. ಅದರ ಬಿಸಿ ಸರಸಮ್ಮನನ್ನು ಸೋಕದೆ ಹೋಗಲಿಲ್ಲ. ಅಪರಾಧಿಯಂತೆ ಬಂದು ನಿಂತರೂ, ಪ್ರಯತ್ನ ಪೂರ್ವಕವಾಗಿ ಚಿತ್ತಸಮತೆಯನ್ನು ಕಾಯ್ದುಕೊಂಡಿದ್ದಳು ; ಗೆಲುವಾಗಿಯೇ ಇರಲು ಹವಣಿಸುತ್ತಿದ್ದಳು. ಇನ್ನೆಂದಾದರೂ ಆಗಿದ್ದರೆ, ಬೇರೆಯ ಸಂದರ್ಭ ದಲ್ಲಿ, ' ಏನೂ ಅಂದ್ರೆ ! ಬಾರೆ ಅಂತೀರಿ. ನಾನೇನು ಗುಲಾಮಳೆ ' ಎಂದು ನಗುನಗುತ್ತಲೋ, ಅಥವಾ ತುಸ ಕೋಪದಿಂದಲೋ, ಗಂಡನಿಗೆ ಬುದ್ಧಿ ಕಲಿಸಿಬಿಡುತ್ತಿದ್ದಳು. ಇಂದಿನ ಅವಳ ಎದುರು ಬೀಳದ ನಿಸ್ಸಹಾಯಕ ಮೌನ, ತಬ್ಬಿಬ್ಬಾಗಿ ಮುಂದುಗಾಣದ್ದರಿಂದ ಅವಲಂಬಿಸಬೇಕಾಗಿ ಬಂದ ತಟಸ್ಥಭಾವ. ಏನೋ ರಹಸ್ಯವನ್ನು ಬೈತಿಡಲು ಪ್ರಯತ್ನಿಸುತ್ತಿದ್ದ ಮನಸ್ಸಿನ ಹೊಯ್ದಾಟ ವನ್ನು ಪ್ರತಿಬಿಂಬಿಸುತ್ತಿದ್ದ ಎದೆಯ-- ಇತರ ಸಂದರ್ಭಗಳಲ್ಲಿ ಆಲಿಂಗನ ಸುಖ ವನ್ನು ಪಡೆಯುಲು, ನೀಡಲು, ಆಹ್ವಾನಿಸುತ್ತಿದ್ದ ತುಂಬು ಎದೆಯ ಹೊಯ್ದಾಟ, ಬೆಳ್ಳಡರಿದ ಮುಖ – ಇವೆಲ್ಲಾ ಯಾವುದೋ ವಿಚಾರದಲ್ಲಿ ಅವಳು ಅಪರಾಧಿ ಎಂಬುದನ್ನು ಸಾರುತ್ತಿದ್ದವು. ಯಾವ ವಿಚಾರದಲ್ಲಿ ಎಂಬ ಬಗ್ಗೆ ಸುಬ್ಬುಕೃಷ್ಣನಿಗೆ ಮನದಟ್ಟಾಗಿ ಹೋಗಿತ್ತು. ಸಿಗರೇಟಿನ ತುಂಡು ಆ ಅಹಿತಕರ ಭಾವನೆಗೆ ಸಾಕ್ಷಿಯಾಗಿತ್ತು.

" ಯಾರು ಬಂದಿದ್ದರು ಮನೆಗೆ, ನಾನು ಬರುವುದಕ್ಕೆ ಮೊದಲು, ಬಗುಳು ?"

" ಯಾರೂ ಇಲ್ಲವಲ್ಲ...."

" ನಿಜವಾಗಿಯೂ ?...."

" ನಿಜವಾಗಿಯೂ,...ನನ್ನಾಣೆಗೂ...."

" ನನ್ನಾಣೆಗೂ...."

" ............... "

" ಯಾಕೆ, ಬಗುಳು...."

" ಏನೇ ಆಗಲಿ ನಿಮ್ಮಾಣೆ ಇಡುವುದಿಲ್ಲ ಅಂತ ಅವೊತ್ತೇ ಹೇಳಲಿಲ್ಲವೆ...."

" ಪತಿವ್ರತೆ! ಪತಿಸೇವಾ ಪಾರಾಯಣೆ! ಯಾರನ್ನೋ ಮೆಚ್ಚಿಸುವುದಕ್ಕೆ ಶಿಸ್ತು ಶೃಂಗಾರ, ತಿಂಡಿ ತೀರ್ಥ! ನನಗೆ ಅಂತ ನಾಟಕ! ನಿನ್ನ ದುರದೃಷ್ಟಕ್ಕೆ ನಾನು ಮುಂಚೆ ಬಂದುಬಿಟ್ಟೆ; ಮಾಲು ಸಮೇತ ಕಳ್ಳ ಸಿಕ್ಕಿಬೀಳುವ ಹಾಗೆ ನೀನು ಸಿಕ್ಕಿಬಿದ್ದೆ; ಯಾರೂ ಬಂದಿರಲಿಲ್ಲ ಅಂತ ಬಾಯಿ ಬಡಿಯುತ್ತೀ. ನಿನ್ನನ್ನ ಎರಡು ತುಂಡಾಗಿ ಕಡಿದರೂ ಪಾಪ ಬರುವುದಿಲ್ಲ...."

" ............... "

"Silence is consent" ಅಂತ ಇಂಗ್ಲಿಷಿನಲ್ಲಿ ಹೇಳುತಾರೆ, ಗೊತ್ತಿದೆಯೋ? ನೀನು ಮಾತನಾಡದೇ ಇರೋದೆ ತಪ್ಪನ್ನ ಒಪ್ಪಿಕೊಂಡ ಹಾಗೆ.... ನಾನೇನು ಹೆಂಡಕುಡುಕನಲ್ಲ, ನಿರಕ್ಷರ ಕುಕ್ಷಿಯಲ್ಲ, ಹೆಡ್ಡನಲ್ಲ, ಹುಚ್ಚನಲ್ಲ, ನಿನ್ನ ತಲೆ ಕಡಿಯುವುದಕ್ಕೆ. ಯಾರು ಬಂದಿದ್ದರು, ಯಾರಿಗಾಗಿ ಈ ಎಲ್ಲ ವೈಭವ? ನಿಜವನ್ನು ನಿಜ ಅಂತ ಒಪ್ಪಿಕೊಂಡು ಹೇಳಿಬಿಡು. ಅಷ್ಟೆ, ನಾನು ಕೇಳುವುದು. ನಿನ್ನ ಪಾಡು ನಿನಗೆ, ನನ್ನ ಪಾಡು ನನಗೆ...."

" ನೀವು ಪಡುತಾ ಇರುವ ಸಂಶಯವನ್ನು ನಿಜ ಅಂತ ಮೊದಲು ನೀವು ಖಾತರಿ ಪಡಿಸಿಕೊಳ್ಳಿ. ನೀವು ಸಂತೋಷಪಡಲಿ ಅಂತ ಮಾಡಿದ ಕೆಲಸಾನೆ ನಿಮ್ಮ ಹಾಳು ಸಂಶಯಕ್ಕೆ ಸಾಕ್ಷಿಯಾಗಿ ಇಟ್ಟುಕೊಳ್ಳುವುದು ನ್ಯಾಯ ಅಲ್ಲ...."

" ಈ ಸಾಕ್ಷಿಗೆ ಏನು ಹೇಳುತ್ತಿ?" ಎಂದು ಮೇಜಿನ ಮೇಲಿದ್ದ ಕಾಗದದ ಪೊಟ್ಟಣವನ್ನು ಅವನು ಅವಳ ಕೈಗೆ ಕೊಟ್ಟನು. ಅವಳು ಬಿಚ್ಚಿ ನೋಡಿದಳು. ಸಿಗರೇಟಿನ ತುಂಡು ಅನಿಷ್ಟ ಸಾಕ್ಷ್ಯವನ್ನು ಸಾರುತ್ತಿತ್ತು. ಅವಳ ಬಾಯಿ ಕಟ್ಟಿಹೋಯಿತು; ಮುಖ ಇನ್ನಷ್ಟು ವಿವರ್ಣವಾಯಿತು; ತುಟಿ ಅದುರ ತೊಡಗಿತು; ಕೈಗಳು ಕಂಪಿಸತೊಡಗಿದುವು; ಸಿಗರೇಟಿನ ತುಂಡಿದ್ದ ಕಾಗದ ಕೈಯಿಂದ ಜಾರಿ ಬಿದ್ದಿತು.

"ಒಪ್ಪಿಕೊಳ್ಳಲೆ ಬೇಡವೆ? ಹೇಳಿಬಿಡಲೆ ಬೇಡವೆ? ಇವೊತ್ತಲ್ಲ ನಾಳೆ ನಿಜ ಗೊತ್ತಾಗದೆ ಇರುತ್ತದೆಯೇ? ಥೂ, ಎಂಥ ಪರೀಕ್ಷೆ? ಅಪರಾಧವೇನೋ ನನ್ನದೇ. ಆದರೆ, ಈಗಲೇ ಒಪ್ಪಿಕೊಳ್ಳುವುದು ಸರಿಯೇ, ಒಪ್ಪಿಕೊಂಡು ಬಿಡಲೆ?" ಎಂದು ಸರಸಮ್ಮ ಮಿಾನಮೇಷ ಎಣಿಸುತ್ತಿರುವಷ್ಟರಲ್ಲಿ ಸುಬ್ಬುಕೃಷ್ಣ ಮರುಮಾತಾಡದೆ ಹೊರಟುಬಿಟ್ಟದ್ದ.

ಸಿಗರೇಟಿನ ತುಂಡು ಅಲ್ಲಿಯೇ ಬಿದ್ದಿತ್ತು; ನಡೆದ ಘಟನೆಯ ಗುರುತಾಗಿ, ಸುಳ್ಳಿನ ಸಂಕೇತವಾಗಿ, ಮುಂದಿನ ಎಚ್ಚರಿಕೆಯಾಗಿ. "ಥೂ, ಹಾಳಾದ್ದೆ" ಎಂದು ಅದನ್ನು ಶಪಿಸಿದಳು ಸರಸಮ್ಮ.

× × × ×

ಹೊರಕ್ಕೆ ಹೊರಡುವ ಉಡುಪು ಧರಿಸಿದ ಸುಬ್ಬುಕೃಷ್ಣ ಹೊರಕ್ಕೆ ಹೊರಟದ್ದನ್ನು ಕಂಡು ಸರಸಮ್ಮನಿಗೆ ತುಸ ಸಮಾಧಾನವಾದರೂ, ಗಂಡ ಹಿಂದಿರುಗಿದ ಮೇಲೆ ಅವನ ಕೋಪವನ್ನು ಹೇಗೆ ಉಪಶಮನ ಮಾಡುವುದೆಂಬುದರ ದಾರಿ ಗಾಣದೆ, ಮುಳ್ಳು ಪೊದೆಯಲ್ಲಿ ಸಿಕ್ಕಿಕೊಂಡು ಹೊರ ಬರಲಾಗದೆ ತರತರ ನಡುಗುವ ಕಿರು ಹಕ್ಕಿಯಂತೆ ಅವಳ ಮನಸ್ಸು ಕಳವಳಗೊಂಡು ಕಂಗೆಟ್ಟಿತ್ತು. ನಿಂತೆಡೆಯಲ್ಲಿಯೇ ಕುಸಿದು ಕುಳಿತುಬಿಟ್ಟಳು. ಎಷ್ಟು ಚಿಂತಿಸಿದರೂ ಬಗೆ ಹರಿಯಲಿಲ್ಲ. ಚಿಂತಿಸಿದಷ್ಟೂ ಚಿಂತೆಯ ಹೊರೆ ಮನಸ್ಸಿನ ಮೇಲೆ ಭಾರಭಾರವಾಗುತ್ತ ಬಂತು; ಮನಸ್ಸು ಕ್ಷತವಿಕ್ಷತವಾಯಿತು. ನಿಜವನ್ನು ಹೊರಗೆಡಹದೆ ತನ್ನ ಈಗಣ ಮೌನದ ನಿಲುವನ್ನೇ ಮುಂದುವರಿಸಿಕೊಂಡು ಹೋದರೆ, ತಮ್ಮಿಬ್ಬರ ನಡುವೆ ತೋಡಿಕೊಂಡಿರುವ ಸಂಶಯ ವಿರಸದ ಕಾಲುವೆ ಕಡಲಾಗುವುದರಲ್ಲಿ ಸಂದೇಹವಿಲ್ಲವೆಂದು ಅವಳಿಗೆ ಮನದಟ್ಟಾಯಿತು.

ನಿಜವನ್ನೊಪ್ಪಿಕೊಳ್ಳುವುದಲ್ಲದೆ ಅವಳಿಗೆ ಬೇರೆ ಪರಿಹಾರ ಮಾರ್ಗ ಕಾಣಲಿಲ್ಲ. ನಿಜವನ್ನೊಪ್ಪಿಕೊಂಡರೂ, ಅದರ ಪರಿಣಾಮವೇನಾಗುವುದೊ? ಮೊದಲು ನಿಜ ಹೇಳದೆ, ಯಾರೂ ಬಂದಿರಲಿಲ್ಲ ಎಂದು ಸಾಧಿಸಿ, ಈಗ ನಿಜವನ್ನೇ ಹೇಳಿ ಒಪ್ಪಿಕೊಂಡರೂ ನಿಜವೇ ಸುಳ್ಳಾಗಿ ಕಾಣಬಹುದಲ್ಲ? ಅದರಲ್ಲಿ ನಂಬಿಕೆ ಹುಟ್ಟದೆ ಹೋಗಬಹುದಲ್ಲ? ಅಬ್ಬಾ! ಏನು ವಿಚಿತ್ರ! ಅನುಮಾನಿಸಿ ಹೇಳಿದ, ತಡೆದು ಹೇಳಿದ, ನಿಜವೂ ಸುಳ್ಳಾಗಿ ತೋರಬಹುದು! ತನ್ನ ತಾಯಿ ಹೇಳಿದ ಬೀಳ್ಕೊಡುವ ಮಾತು, ಎಂದೂ ನೆನಪಿಗೆ ಬಾರದ್ದು ಇಂದು ನೆನಪಿಗೆ

ಬಂದು, ಬೆಳ್ಳಂಬೆಳಕಾದಂತಾಯಿತು : "ಪತಿ ಒಬ್ಬ ದೇವರಾದರೆ, ನಿಜ ಇನ್ನೊಂದು ದೈವ. ಎಂಥ ವಿಪತ್ತೇ ಬರಲಿ, ಗಂಡನಿಗೆ ಸುಳ್ಳು ಹೇಳ ಬೇಡ"...."ಇಲ್ಲ, ಇನ್ನು ಮುಂದೆ ಸುಳ್ಳಾಡುವುದಿಲ್ಲ" ಎಂದು ನಿರ್ಧರಿಸಿ ಕೊಂಡಳು. ಇದರಿಂದ ತುಸ ನೆಮ್ಮದಿಯಾದರೂ, ಗಂಡ ಹಿಂದಿರುಗದಿದ್ದರೆ ? ಎಂಬ ಗಾಬರಿಯಿಂದ ಆತಂಕವಾಯಿತು.

× × × ×

ಮನೆಯ ಮುಂದೆ ಗಡಗಡ ಎಂದು ಜಟಕಾಗಾಡಿ ನಿಂತ ಸದ್ದಾಗಿ, ಸರಸಮ್ಮನನ್ನು ಚಿಂತಾ ಸಮಾಧಿಯಿಂದ ಎಚ್ಚರಿಸಿತು. "ಪಕ್ಕದ ಮನೆಗೆ ಯಾರಾದರೂ ಬಂದರೋ ಏನೋ" ಎಂದುಕೊಳ್ಳುವಷ್ಟರಲ್ಲಿ, ಸುಬ್ಬುಕೃಷ್ಣನೇ ದಡದಡನೆ ಒಳಕ್ಕೆ ಬಂದು ಸರಸರನೆ ಕೋಟು ಟೋಪಿ ಧರಿಸಿಕೊಂಡ. ಅಷ್ಟರಲ್ಲಿ ಜಟಕಾ ಗಾಡಿಯವನು ಬಾಗಿಲಲ್ಲಿ ನಿಂತು, "ಬೇಗ ಬಂದ್‌ಬಿಡಿ ಸಾಮಿ. ಗಾಡಿಗೆ ದೀಪ ಇಲ್ಲ. ನಿಮ್ಮನ್ನ ಬಿಟ್ಟು ಹೊಂಟ್‌ಹೋಗ್‌ಬೇಕು ಮನೇ ಕಡೆ" ಎಂದ. "ಜಾವ್‌ಜಿ ಜಾವ್‌ಜಿ, ಆತುಂ" ಎಂದು ಸುಬ್ಬುಕೃಷ್ಣ ತನ್ನ ಹಾಸಿಗೆ ಯನ್ನು ಕಟ್ಟಿಕೊಳ್ಳಲು ಸಿದ್ಧನಾದ. ಸರಸಮ್ಮನಿಗೆ ಆಶ್ಚರ್ಯ, ಇಮ್ಮಡಿಯ ಗಾಬರಿ. ಎಂಥ ಪ್ರಮಾದವಾಯಿತು, ಎಂತಹ ಅನಾಹುತ ಸಂಭವಿಸು ವುದರಲ್ಲಿದೆ ಎಂದು ಅವಳಿಗೆ ದಿಗ್‌ಭ್ರಮೆಯಾಯಿತು.

"ಎಲ್ಲಿಗೆ ಅಂದ್ರೆ ?" – ಧೈರ್ಯ ಮಾಡಿ ಕೇಳಿದಳು ಸರಸಮ್ಮ.

"ಆಗಲೇ ಹೇಳಲಿಲ್ಲವೆ ? ಇನ್ನು ನನ್ನ ಪಾಡು ನನಗೆ, ನಿನ್ನ ಪಾಡು ನಿನಗೆ, ನನಗೆ ಹೋಟೆಲಿನಲ್ಲಿ ಹೆಂಡತಿಯ ಕಾಟ ಇರುವುದಿಲ್ಲ. ನಿನಗೆ ಮನೆಯಲ್ಲಿ ಗಂಡನ ಕಾಟ ತಪ್ಪಿತು, ಸ್ವತಂತ್ರಳಾಗಿರಬಹುದು. ಹೌದೋ ಅಲ್ಲವೋ ?"

"ನಿಮ್ಮ ಕಾಲಿಗೆ ಬಿದ್ದು ಬೇಡಿಕೊಳ್ತೀನಿ ಅಂದ್ರೆ. ನಿಮ್ಮ ಸಂಶಯ ವೆಲ್ಲ ಸುಳ್ಳು. ಬರಬಾರದಂಥನರು ಯಾರೂ ಮನೆಗೆ ಬಂದಿಲ್ಲ."

"ಹಾಗಾದರೆ ಹೇಳುವುದಕ್ಕೆ ಹೆದರಿಕೆಯೇನು, ಯಾರು ಬಂದಿದ್ದವರು ?"

"ನಮ್ಮ ಅಣ್ಣ...."

"ನಿಮ್ಮ ಅಣ್ಣ ?....ನಿನ್ನನ್ನ ಕರೆದುಕೊಂಡು ಬರುವುದಕ್ಕೆ ನಿಮ್ಮ ಮನೆಗೆ ಬಂದಿದ್ದಾಗ ನನ್ನ ಕೈಲಿ ಜಗಳ ಕಾದು, ಹೀನಾಮಾನ ಬೈದು,

ನನ್ನ ಮನೆಯ ಹೊಸಿಲು ಮೆಟ್ಟುವುದಿಲ್ಲ ಅಂತ ಬಗುಳಿದ್ದನಲ್ಲ ಅವನೋ, ಅಥವಾ...."

"ಅವನೇ, ರಾಜ...."

"ರಾಜ, ರಾಜ! ಪೋಲಿರಾಜ, ಪಟಿಂಗರಾಜ, ಇಸ್ಪೀಟು ರಾಜ!.... ಬೆಂಗಳೂರು ಹೋಟಲು ಸಿನಿಮಾ ಜೂಜಿನ ಕಟ್ಟೆ ಎಲ್ಲಾ ಅವನ ಗುತ್ತಿಗೆ. ದಾರಿಯಲ್ಲಿ ಕಂಡರೂ ತಲೆ ಬಗ್ಗಿಸಿಕೊಂಡು ಹೋಗುತ್ತಾನೆ....ಇವೊತ್ತು, ಮನೆಗೆ ಬಂದಾಗ, ಮಾರ್ಕೆಟ್ ಬಸ್ ಸ್ಟ್ಯಾಂಡಿನಲ್ಲಿ ಕಂಡೂ ಕಂಡ....ಅವನು ಮನೆಗೆ ಬಂದಿದ್ದ ಅಂತ ನಾನು ಹೇಗೆ ಕನಸು ಕಾಣಲಿ, ನನ್ನನ್ನ ಶತ್ರು ಅಂತ ಭಾವಿಸಿರುವವನು ? ಆ ರಾಜ ಬಂದಿದ್ದ, ಅವನಿಗೆ ಈ ಆತಿಥ್ಯ ಸಂತೋಷ!"

"ಅವನಿಗೋಸ್ಕರ ಅಲ್ಲ ಅಂದ್ರೆ, ನಿಮಗೋಸ್ಕರವೆ. ನಿಮ್ಮನ್ನ ಸಂತೋಷಪಡಿಸಿ, ಅವನು ಬಂದದ್ದನ್ನ ಮುಚ್ಚೋಣ ಅಂತ ಮಾಡಿದೆ. ನಾನು ಮೋಸ ಹೋದೆ. ಮೈಸೂರಿನಲ್ಲಿ ಯಾವುದೋ ಬ್ಯಾಂಕಿನಲ್ಲಿ ಕೆಲಸ ಅಂದ.... ಅಲ್ಲಿ...."

"ಅವನು ಕೆಲಸ ಮಾಡಿ ಹಾಳಾದ. ಹೋಗಲಿ. ನಮ್ಮ ಮನೆ ಹೊಸಿಲು ತುಳಿಯುವುದಿಲ್ಲ ಅಂದ ಅವನು ಬಂದಿದ್ದಾದರೂ ಯಾಕೆ ?"

"ಅದನ್ನೆ ಹೇಳೋಕೆ ಹೊರಟಿದ್ದೆ....ನೀವು ಕೋಪಿಸಿಕೊಳ್ಳದೆ ಕ್ಷಮಿಸು ತೀನಿ ಅಂತ ಹೇಳಿದರೆ ಹೇಳುತೀನಿ" – ಗೋಗರೆಯುತ್ತ ಕೇಳಿದಳು.

ಸುಬ್ಬುಕೃಷ್ಣನಿಗೆ 'ಅಯ್ಯೋ' ಎನ್ನಿಸಿತು.

"ಹ್ಞೂ. ಹೇಳು."

"ನಿಮ್ಮ ಚುರುಕು ಕಣ್ಣಿಗೆ ಸಿಗರೇಟಿನ ತುಂಡು ಕಂಡಿತು. ನನ್ನ ಎಡಗೈಯಲ್ಲಿ ಒಂದು ಚಿನ್ನದ ಬಳೆ ಕಡಿಮೆಯಾಗಿದ್ದದ್ದು ಕಾಣಲಿಲ್ಲವೆ ?"

"ಏನು, ಅವನಿಗೆ ಕೊಟ್ಬಿಯಾ!"

"ಹ್ಞೂ....ಬ್ಯಾಂಕಿನಲ್ಲಿ ನಾನು ಖಜಾಂಚಿ. ಲೆಕ್ಕ ವ್ಯತ್ಯಾಸವಾಗಿ ಎಷ್ಟೋ ಹಣ ಕಡಮೆ ಬಿದ್ದಿದೆ. ನಾಳೆ ಭರ್ತಿ ಹಾಕದೆ ಇದ್ದರೆ ಜೈಲಿಗೆ ಕೂರಿಸುತ್ತಾರೆ....ಅಂತ ಒಂದೇ ಸಮನೆ ಅಳುವುದಕ್ಕೆ ಶುರುಮಾಡಿ ಬಿಟ್ಟ ಅಂದ್ರೆ....ಬೆನ್ನಲ್ಲಿ ಬಿದ್ದವನು, ಕರುಳು ಚುರಕ್ ಅಂತು. ಕಳಚಿ ಕೊಟ್ಟು ಬಿಟ್ಟೆ...."

“ ಹೋಗಲಿ, ನಿನ್ನ ಬುದ್ಧಿ ಮಂಕಾದರೂ ಕರುಳಾದರೂ ಚುರುಕಾಗಿದೆ ಯಲ್ಲ, ಸಂತೋಷ....”

ಈ ಸಂದರ್ಭದಲ್ಲಿ ಪ್ರತ್ಯುತ್ತರ ಕೊಡಲು ಸರಸಮ್ಮ ಸಮರ್ಥಳಾಗಲಿಲ್ಲ.

× × × ×

ಜಟಕಾ ಗಾಡಿಯವನು ಮತ್ತೆ ಬಾಗಿಲ ಬಳಿ ಬಂದು ಗೊಣಗತೊಡಗಿದ: “ ಎನ್ ಸಾಮಿ, ಕತ್ಲಾಗ್ತ ಬಂತು, ದೀಪ ಇಲ್ಲ ಅಂತ ಆಗಲೇ ಹೇಳ್ದೆ. ಜಲ್ ಜಲ್ದಿ ಬನ್ನಿ ಸಾಮಿ.”

“ ಜಾವ್ ಜಿ. ಅತುಂ....”

ಗಾಡಿಯವನು ಮತ್ತೆ ಹೊರಟ, ಉರ್ದುವಿನಲ್ಲಿ ಗೊಣಗುತ್ತ.

“ ಇಬ್ಬರ ಅಲಂಕಾರವೂ ಪೂರ್ತಿಯಾಗಿದೆ, ಗಾಡಿ ಸಿದ್ಧವಾಗಿದೆ. ನಡಿ ” ಎಂದ ಸುಬ್ಬುಕೃಷ್ಣ, ನಗುತ್ತ.

“ ಎಲ್ಲಿಗೆ ?!? ”

“ ನೀನೇ ಹೇಳಿದ್ದೆಯಲ್ಲ, ಸಿನಿಮಾಕ್ಕೆ ! ಸಂಪೂರ್ಣವಾಗಿಬಿಡಲಿ ನಿನ್ನ ಸೇವಾರ್ಥ ! ”

# ಪೆಪ್ಪರಮೆಂಟು

" ಏನಾದರೂ ಮಾಡಿ. ಯಾರದಾದ್ರು ಮನೇಗೆ ಕನ್ನ ಹಾಕಿ, ಯಾವದಾದ್ರೂ ಅಂಗಡೀನ ಲೂಟಿ ಮಾಡಿ. ಇಲ್ಲ ನಮ್ಮನ್ನ ಕೊಂದಾದರೂ ಬಿಡಿ.... ಮಕ್ಕಳ್ನ ಏಸು ದಿನ ಉಪಾಸ ಕೆಡವ್ತೀರ...."

ಮಕ್ಕಳ ಹಸಿವನ್ನು ಕಂಡು ಸಹಿಸಲಾರದೆ ಬೆಂದ ಹೃದಯದಿಂದ ಹೆಂಡತಿ ಯಾಡಿದ ಕಿಡಿನುಡಿಗಳು ಕುಳ್ಳಯ್ಯನ ಒಡಲಿಗೆ ಕಿಚ್ಚಿಕ್ಕಿದುವು. ವಾಸ್ತವವಾಗಿ ಅವನು ಹುಚ್ಚನಂತಾಗಿದ್ದ. ಏಕೆಂದರೆ, ಅವನಿಗೂ ತಡೆಯಲಾರದ ಹಸಿವು. ಸಿಕ್ಕಿದ ಅಲ್ಪ ಸ್ವಲ್ಪವನ್ನೂ ತಾನು ತಿನ್ನದೆ ಮನೆಗೊಯ್ದು ಕೊಡುತ್ತಿದ್ದ: ಆದರೂ ಮಕ್ಕಳು ಹಸಿವು ಹಸಿವು ಎನ್ನುತ್ತಲೇ ಇವೆ. ಪಾಪ, ಕೊಟ್ಟದ್ದನ್ನೆಲ್ಲಾ ಮಕ್ಕಳಿಗೇ ಹಾಕುತ್ತಿದ್ದ ಹೆಂಡತಿಗೂ ಹಸಿವು. ತನ್ನ ಹಸಿವಿಗೆ ತಾನೇ ಸಾಕ್ಷಿ.

" ಯಾರದಾದ್ರೂ ಮನೇಗೆ ಕನ್ನ ಹಾಕಿ, ಯಾವದಾದ್ರೂ ಅಂಗಡೀನ ಲೂಟಿ ಮಾಡಿ...."

" ನನ್ನ ಎಂಡ್ತಿ ಹಿಂಗೆ ಹೇಳಿದ್ಲು ಅಂತ ನಾನು ಆ ಕೆಲಸ ಮಾಡಭೈದ. ಪರರ ಒಡವೆ ಕೊಂಡರೆ ಶಿವ ಮೆಚ್ಚ್ಯಾನ?....ಅಂದ್ರೆ, ಶಿವಂಗೆ ಏನು ಬಂದೈತೆ? ನಮ್ಮ ಹಸಿವು ತಿಳಿಯೋಕಿಲ್ಲವಲ್ಲ? ಕೊಟ್ಟೋರಿಗೇ ಕೊಡ್ತಾ ಇರ್ತಾನೆ. ಇಲ್ಲದೋರಿಗೆ ಇಲ್ವೇ ಇಲ್ಲಾ. ಇದೆಲ್ಲಿಯ ನ್ಯಾಯ?....ನ್ಯಾಯ ಇಲ್ಲದೆ ಉಂಟಾ – ಅವನಿಗೆ ಗೊತ್ತು, ಯಾರಿಗೆ ಕೊಡಬೇಕು ಯಾರಿಗೆ ಕೊಡಬಾರದು ಅಂತ. ಮೇಲೆ ಕುಂತುಕೊಂಡು ಅಳೀತಾ ಅವ್ನೆ, ಅಳೀತಾ ಅವ್ನೆ. ನಾವು ಪಡಕೊಂಡು ಬರ್ಲಿಲ್ಲ, ನಮಗೆ ಅಳಿಯೋಕಿಲ್ಲ...."

ಕುಳ್ಳಯ್ಯನ ಹೊಟ್ಟೆ ಖಾಲಿಯಾಗಿದ್ದರೂ, ತಲೆ ನಾನಾ ಯೋಚನೆ ಗಳಿಂದ ತುಂಬಿ ಭಾರವಾಗಿತ್ತು. ಒಮ್ಮೆ ಹೆಂಡತಿ ಮಕ್ಕಳ ಮೇಲೆ ಆಕ್ರೋಶ – ಅವಳನ್ನ ಯಾಕೆ ಕೈಹಿಡಿದೆನೋ, ಒಂದಲ್ಲ ಅಂತ ಐದು ವರ್ಷಗಳಲ್ಲಿ ಮೂರು ಮಕ್ಕಳು ಯಾಕೆ ಹುಟ್ಟಿದುವೋ ಎಂದು; ಒಮ್ಮೆ ಶಿವನ ಮೇಲೂ ಆಕ್ರೋಶಗೊಳ್ಳುತ್ತಾನೆ – ಅವನಿಗೆ ಮೂರು ಕಣ್ಣಿದ್ದೂ ಕುರುಡನೆಂದು

(ಶಿವನಿಗೆ ವಕ್ರದೃಷ್ಟಿಯನ್ನು ಆರೋಪಿಸುವಷ್ಟು ಕಲಿತವನಲ್ಲ ಕುಳ್ಳಯ್ಯ); ಮಗುದೊಮ್ಮೆ ತನ್ನ ಮೇಲೆಯೇ ಕೋಪಗೊಳ್ಳುತ್ತಾನೆ – ತನ್ನ ಹಣೆಬರೆಹಕ್ಕೆ ಯಾರು ಹೊಣೆ ಎಂದು. ಅವನಿಗೆ ದಾರಿ ತೋರದು; ಅವನು ದಿಕ್ಕು ಕಾಣ.

ಕುಳ್ಳಯ್ಯ ನಗರದ ಪೇಟೆಯ ಬೀದಿಗಳನ್ನು ಹಾಯ್ದು ಶ್ರೀಮಂತರಿರುವ ಭಾಗಕ್ಕೆ ಬರುತ್ತಿದ್ದಾನೆ. ಉದ್ದಕ್ಕೂ ನೂರಾರು ಅಂಗಡಿಗಳೂ ಮುಂಗಟ್ಟುಗಳೂ, ಅವುಗಳಲ್ಲಿ ತುಂಬಿದ್ದ ಆಹಾರಸಾಮಗ್ರಿ ಮೊದಲ್ಗೊಂಡು ನಾನಾಬಗೆಯ ಸಾಮಗ್ರಿಗಳೂ ಅವನ ಹೆಂಡತಿಯ ಮಾತನ್ನು ನೆನಪಿಗೆ ತರುತ್ತಿದ್ದುವು. ಅಂಗಡೀನ ಲೂಟ ಮಾಡಬೇಕಂತೆ! ಲೂಟಿ! ಶಿವಂಗೆ ಕಣ್ಣಿಲ್ಲ ಅಂದ್ರೆ ಜನಕ್ಕೆ ಕಣ್ಣಿಲ್ಲವಾ? ಸಾವಿರ ಜನದ ಮುಂದೆ ಸಾಮಾನು ಎಗರಿಸಿದ್ರೆ ಸುಮ್ಮನೆ ಬಿಟ್ಟಾರ! ಏನೋ ಹೇಳದ್ಲು, ಪಾಪ."

ಜೇಬಿನಿಂದ ಹಣದ ಪಾಕೀಟು, ಫೌಂಟನ್‌ಪೆನ್ ಇವನ್ನೆಲ್ಲಾ ಜೇಬುಗಳ್ಳರು ಎಗುರಿಸುತ್ತಾರೆ ಎಂದು ಕುಳ್ಳಯ್ಯ ಬಲ್ಲನು. ತಾನೂ ಏಕೆ ಜೇಬುಗಳ್ಳನಾಗಬಾರದು? ಎಂಬ ಆಲೋಚನೆಯೂ ಆತನ ತಲೆಯನ್ನು ಕೆಡಿಸದಿರಲಿಲ್ಲ.

"ಆ ಕೈಚಳಕ ನನಗೆಲ್ಲಿ ಬರಬೇಕು. ಅದೂ ಒಂದು ವಿದ್ಯ. ನಾನು ಕಲೀನಿಲ್ಲ" – ಎಂದು ತನ್ನ ಅಸಮರ್ಥತೆಯನ್ನು ತಾನೇ ಒಪ್ಪಿಕೊಂಡು, "ಹಾಳಾದ್ದು ಇದೇನು, ಕಳ್ತನದ ಯೋಚನೆ ಬಿಟ್ಟು ಇನ್ನೊಂದು ಬರೋಕಿಲ್ಲವಲ್ಲಾ!" ಎಂದು ತನ್ನಲ್ಲಿ ತಾನು ಜುಗುಪ್ಸೆಗೊಂಡು ಮುಂದೆ ನಡೆದಿದ್ದನು.

ಕಳ್ಳತನ ಮಾಡಲು ಮನಸ್ಸೊಪ್ಪದ, ಧೈರ್ಯವೂ ಇಲ್ಲದ, ಸಾಮರ್ಥ್ಯವೂ ಇಲ್ಲದ ನಿರುದ್ಯೋಗಿ ಕುಳ್ಳಯ್ಯ ನಗರದ ರಾಜಮಾರ್ಗವೊಂದರಲ್ಲಿ ನಡೆಯಲಾರದೆ ನಡೆದು ಹೋಗುತ್ತಿದ್ದನು. ಆಗ ತಾನೆ ಮಾರ್ಗದ ವಿದ್ಯುದ್ದೀಪಗಳೆಲ್ಲವೂ ತಕ್ಕನೆ ಹೊತ್ತಿಕೊಂಡುವು.

"ಎಜ್ಜೆಗೊಂದು ದೀಪ! ಒಂದು ನಲ್ಲೀನಾದ್ರೂ ಮಡಗಿಸಬಾರ್ದ? ನಮ್ಮಂತ ಹೊಟ್ಟೆಗಿಲ್ದೋರು ನೀರನಾದ್ರೂ ಕುಡೀಬೈದು" – ಎಂದು ನಾಲಗೆಯನ್ನು ತುಟಿಗಳ ಮೇಲೆ ಆಡಿಸಿದ.

ಆಗಲೇ ಗಂಭೀರವಾಣಿಯೊಂದು ಅವನ ಕಿವಿಯನ್ನು ಮುಟ್ಟಿತ್ತು. ಅದು ಯಾವೆಡೆಯಿಂದ ಹೊರಟು ಕೇಳಿಬರುತ್ತಿತ್ತೋ ಆ ಎಡೆಯನ್ನು ಸಮೀಪಿಸಿದಂತೆ ಅವನಿಗೆ ನುಡಿಗಳೂ ಸ್ಪಷ್ಟವಾಗಿ ಕೇಳತೊಡಗಿದುವು.

ಅದೊಂದು ಭವ್ಯಮಂದಿರ. ಒಳಗಡೆ ವಿದ್ವಾಂಸರೊಬ್ಬರು ಉಪನ್ಯಾಸ ಮಾಡುತ್ತಿದ್ದರು. ಹೊರಗಡೆಗೂ ಅದು ಕೇಳುವಂತೆ ಧ್ವನಿವರ್ಧಕ ಯಂತ್ರ ವನ್ನು ಅಳವಡಿಸಲಾಗಿತ್ತು. ಹಲವಾರು ಮಂದಿ ದಾರಿಯಲ್ಲೆ ನಿಂತೋ ಕುಳಿತೋ ಉಪನ್ಯಾಸಕ್ಕೆ ಕಿವಿಗೊಟ್ಟಿದ್ದರು. ಕಾಲು ಸೋತ ಕುಳ್ಳಯ್ಯನೂ ಕುಕ್ಕರಿಸಿದ.

ವಿದ್ವಾಂಸರು ಉಪನ್ಯಾಸದಲ್ಲಿ ಏನೇನೋ ಹೇಳುತ್ತಿದ್ದರು. ಅದೊಂದೂ ಅವನಿಗೆ ಅರ್ಥವಾಗುತ್ತಿರಲಿಲ್ಲ. ಮಧ್ಯೆ ಮಧ್ಯೆ ಒಂದೊಂದು ಮಾತು ಅರ್ಥ ವಾಗುತ್ತಿತ್ತು. ಇದ್ದಕ್ಕಿದ್ದ ಹಾಗ ತನಗೆ ಅರ್ಥವಾಗುವ ನುಡಿಗಳು ಕೇಳಿ ಬಂದುವು :

"ಕಳಬೇಡ, ಕೊಲಬೇಡ, ಹುಸಿಯ ನುಡಿಯಲು ಬೇಡ,
ಅನ್ಯರಿಗೆ ಅಸಹ್ಯಪಡಬೇಡ...."

ಬಸವಣ್ಣನವರು ಈ ಮಾತುಗಳನ್ನು ಹೇಳಿದ್ದಾರೆಂದು ಉಪನ್ಯಾಸಕ ರಿಂದ ಕೇಳಿದನು. ಶಿವ, ರಾಮ, ಕೃಷ್ಣ ಇವರೆಲ್ಲ ದೇವರೆಂದು ಕುಳ್ಳಯ್ಯ ಬಲ್ಲನು. ಬಸವಣ್ಣನವರು ತುಂಬ ದೊಡ್ಡವರೆಂದೂ ಕೇಳಿಬಲ್ಲನು. ಅವನು ಲಿಂಗಾಯತನಲ್ಲವಾದ್ದರಿಂದ, ಅವರ ವಿಚಾರ ಹೆಚ್ಚು ತಿಳಿಯದು.

"ಗಾಂಧೀನೂ ಇದನೇ ಹೇಳ್ತಾರೆ ಅಲ್ಲವಾ ?" ಎಂದು ಕುಳ್ಳಯ್ಯ ಪಕ್ಕದಲ್ಲಿದ್ದವರೊಬ್ಬರನ್ನು ಕೇಳಿದನು. ಅವರು ದೊಡ್ಡ ಮನುಷ್ಯರೆಂದು ಇವನ ಭಾವನೆ.

"ಎಲ್ಲಾರೂ ಹೇಳೋದೂ ಇದೇ" ಎಂದರು ಅವರು.

"ಹೌದು ನನ್ನೊಡ್ಯ" ಎಂದು ಕುಳ್ಳಯ್ಯ ಮೇಲಕ್ಕೆದ್ದ. ನಿಶ್ಶಕ್ತಿ ಯಿಂದ ಮಂಡಿಗಳು ಹಿಡಿದುಕೊಂಡುಬಿಟ್ಟಿದ್ದುವು.

("ಇವರನ್ನ ಒಂದು ನಾಲ್ಕಾಣೆ ಬೇಡಲೆ ?....ಎಂದೂ ಯಾರ್ನೂ ಏನೂ ಬೇಡಿಲ್ಲ. ಅದು ಹೆಂಗೆ ಬೇಡೋದು ?....ಬೇಡೋಣ ಅಂದ್ರೆ ನಾಲಗೇನೇ ಬರೋಕಿಲ್ಲವಲ್ಲಾ....ಬೇಡೋಕಿನ್ನ ಕದಿಯೋದೇ ವಾಸಿ ಅಂತ ಕಾಣ್ತದೆ.... ಛೇ ಛೇ, ಬಾರ್ದು. ಆದ್ರೆ, ಆರಡಿ ದೇಹಾನ ಮೂರಡಿ ಮಾಡ್ಕೊಂಡು, ಮೂರಡಿ ಕೈನ ಆರಡಿ ಮಾಡ್ಕೊಂಡು, ಅದು ಹೆಂಗೆ ತಾನೆ ಬೇಡೋವ್ನಾ ? ಮಕ್ಳು, ಮಕ್ಳು – ಈಟ್ಹೊತ್ತಿಗೆ ಏನಾಗವೊ ! ಮಾನ ಬಿಟ್ಟುಬಿಡ್ಬೇಕು....

ಬೇಡ್ದೆ....ಕೊಡದೆ ಹೋದ್ರೋ? ಬಿಕ್ಕೆ ಬೇಡಿದಕ್ಕೈಗೆ ಬೋಕ್ರಿನೂ ಬೀಳ್ಬಿದ್ರೆ?.... ಒಂದು ಮಾತು ತಾನೇ ನಷ್ಟ? ಕೇಳೇಬಿಡೋದು. ಆ ಶಿವ ಏನು ಮಾಡ್ತಾನೋ ನೋಡೋಣ....")

ಬೇಡುವುದಕ್ಕೆ ನಾಲ್ಕಂಗುಲದ ನಾಲಗೆಗಿಂತ ಮೂರಡಿಗಳ ಕೈಯೇ ಮುಂದಾಯಿತು. ಮಾತು ಗಂಟಲಲ್ಲೇ ಸಿಕ್ಕಿಕೊಂಡಿತು. ಕಣ್ಣು ಮಾತ್ರ ಅರಳಿದವು; ಹಲ್ಲು ಕಿಸಿಯಿತು. ಮೂಕಭಾಷೆ ಅರ್ಥವಾಯಿತು ದೊಡ್ಡ ಮನುಷ್ಯರಿಗೆ: ಮೂರು ಕಾಸು ಹಾಕಿದರು ಕೈಗೆ.

ಕುಳ್ಳಯ್ಯನ ಬಿಡಲಾರದ ಗಂಟಲೂ ಬಿಟ್ಟಿತು.

"ಮೂರು ದಿನದಿಂದ ಮಕ್ಕಳು ಉಪವಾಸ. ಒಂದು ನಾಲ್ಕಾಣೆ ಕೊಡಿ ಬುದ್ಧಿ."

ಕುಳ್ಳಯ್ಯನಿಗೆ ಬೇಡುವ 'ರೇಟ್' (ದರ) ತಿಳಿಯದು, ಪಾಪ! ಬೇಡುವ ವಿದ್ಯೆಯಲ್ಲಿ ಬಲ್ಲಿದನಲ್ಲ ಅವನು.

"ನಾಲ್ಕಾಣೆ ಸಾಕೇನೋ! ರೂಪಾಯಿ ಬೇಡವೇನೋ? ನೀನೇನು ಮಾಡಿಯೆ ಪಾಪ! ದುಡ್ಡಿನ ಬೆಲೆ ಇಳಿದುಹೋಗಿದೆ. ಹೋಗು ಹೋಗು. ಇನ್ನೊಂದು ಹತ್ತು ಜನಾನ ಕೇಳು."

ನಾಲ್ಕಾಣೆಯಾಗಬೇಕಾದರೆ, ನಿಜವಾಗಿ, ಹತ್ತು ಜನ ಅಲ್ಲ, ಹದಿನಾರು ಮಂದಿಯನ್ನು ಬೇಡಬೇಕು.

ನೋಡೇಬಿಡೋಣ ಎಂದು ಇನ್ನೊಬ್ಬರನ್ನು ಕೇಳಿದ; ಅದೇ ಪಲ್ಲವಿ.

"ನೋಡೋಕೆ ಕಡಿದರೆ ನಾಲ್ಕು ಆಳು ಆಗುವಹಾಗಿದ್ದಿ. ನೀನೇನು ಕುಂಟನೋ ಕುರುಡನೋ, ಭಿಕ್ಷೆ ಬೇಡುವುದಕ್ಕೆ? ಎಲ್ಲಾದರೂ ಸೌದೆ ಕಡಿ, ಹೋಗು."

ಕುಳ್ಳಯ್ಯ ಕುಂಟನೂ ಅಲ್ಲ, ಕುರುಡನೂ ಅಲ್ಲ; ರೋಗಿಷ್ಠನೂ ಅಲ್ಲ; ಕೈಲಾಗದ ಮುದುಕನೂ ಅಲ್ಲ. ಆಂಜನೇಯನ ಗುಡಿಯ ಮುಂದಣ ಭಿಕ್ಷುಕರ ಸಾಲು ಅವನ ನೆನಪಿಗೆ ಬಂದಿತು. ತಾನು ಸಾಧುವೂ ಅಲ್ಲ, ಗರುಡಗಂಬದ ದಾಸಯ್ಯನೂ ಅಲ್ಲ. ತನಗೆ ಭಿಕ್ಷೆ ಹುಟ್ಟಬೇಕಾದರೆ ವೇಷ ಕಟ್ಟಬೇಕು. ಅದೂ ಮೋಸವಲ್ಲವೆ, ಸುಳ್ಳಲ್ಲವೆ? ಕಳ್ಳತನಕ್ಕಿಂತ ಮೇಲೇನು ಹಾಗಾದರೆ?

"ಕಳಬೇಡ, ಕೊಲಬೇಡ, ಹುಸಿಯ ನುಡಿಯಲು ಬೇಡ."

ಎಲ್ಲಾ ಒಂದೇ. ಅಲ್ಲದೆ, ಅದು ಮುಂದಿನ ಕಥೆ. ಈ ದಿನದ ಕಥೆ ಕಳೆಯಬೇಕಲ್ಲ? ಅದು ಹೇಗೆ?

ಇನ್ನು ಹತ್ತು – ಅಲ್ಲ, ಹದಿನಾರು – ಇಲ್ಲ, ತನ್ನ ಲೆಕ್ಕ ತಪ್ಪು – 'ಇಲ್ಲ' ಎನ್ನುವವರನ್ನೂ ಸೇರಿಸಿಕೊಂಡು ನೂರಾರು ಮಂದಿಯನ್ನು ಬೇಡಬೇಕು, ನಾಲ್ಕಾಣೆ ಸಂಪಾದಿಸುವುದಕ್ಕೆ:

ಅಬ್ಬಾ! ಆಗಲಿ, ನೋಡೋಣ. ಸುತ್ತ ತಿರುಗಿ ನೋಡಿದ, ಅಲ್ಲಿ ಇದ್ದವರೇ ೨೦–೩೦ ಮಂದಿ. ಎಲ್ಲರ ಮುಂದೂ ಅವನ ಕೈ ಚಲಿಸಿತು; ಅವನ ಹೃದಯ ಎಲ್ಲರ ನಿರಾಕರಣೆಯನ್ನೂ ನುಂಗಿತು, ಬೈಗುಳನ್ನು ಉಂಡಿತು, ತಿರಸ್ಕಾರವನ್ನು ಕಂಡಿತು. ಯಾರಿಗೂ ದಯೆಯಿಲ್ಲವಲ್ಲಾ ಎನ್ನಿಸಿತವನಿಗೆ, 'ಅವರನ್ನೇಕೆ ನಿಂದಿಸಲಿ? ಕೊಡಲಿಲ್ಲ ಎನ್ನಲು, ನಾನು ಅವರಿಗೆ ಸಾಲ ಕೊಟ್ಟಿದ್ದೇನೆ?' ಎಂದೂ ಅವನ ಮನಸ್ಸು ಸಮಾಧಾನಗೊಂಡಿತು. ಮುಖ್ಯ, ದೇವರಿಗೆ ತನ್ನ ಮೇಲೆ ದಯೆಯಿಲ್ಲ ಎಂದುಕೊಂಡನು. ಆ ಹೊತ್ತಿಗೆ ಸರಿಯಾಗಿ ಧ್ವನಿವರ್ಧಕ ಈ ವಚನವನ್ನು ಘೋಷಿಸಿತು:

"ಅಕಟಕಟ, ಶಿವ ನಿನಗಿಸಿತು ಕರುಣವಿಲ್ಲ.
ಅಕಟಕಟ, ಶಿವ ನಿನಗಿನಿತು ಕೃಪೆಯಿಲ್ಲ.
ಏಕೆ ಹುಟ್ಟಿಸಿದೆ ಇಹಲೋಕ ದುಃಖಿಯ, ಪರಲೋಕ ದೂರನ?
ಏಕೆ ಹುಟ್ಟಿಸಿದೆ? ಕೂಡಲಸಂಗಮದೇವಾ, ಕೇಳಯ್ಯಾ,
ಎನಗಾಗಿ ಮತ್ತೊಂದು ತರುಮರಾದಿಗಳಿಲ್ಲವೇ?"

ಈ ಮಾತನ್ನು ತನಗೇ ಅನ್ವಯಿಸಿಕೊಂಡ ಕುಳ್ಳಯ್ಯ. 'ಹೌದು' ಎಂದುಕೊಂಡ. ಆ ಹೊತ್ತಿಗೆ, ಉಪನ್ಯಾಸದ ವ್ಯವಸ್ಥಾಪಕರು ಹೊರಕ್ಕೆ ಬಂದು, 'ಒಳಕ್ಕೆ ಬನ್ನಿ, ಒಳಕ್ಕೆ ಬನ್ನಿ' ಎಂದು ಉಪಚಾರ ಮಾಡಿ ಒಬ್ಬೊಬ್ಬರನ್ನಾಗಿ ಒತ್ತಾಯ ಮಾಡಿ ಕರೆಯತೊಡಗಿದರು. ಕೆಲವರು ಒಳಕ್ಕೆ ಹೋದರು; ಉಳಿದವರು ಮನೆಯ ದಾರಿ ಹಿಡಿದರು. ವ್ಯವಸ್ಥಾಪಕರು ಕುಳ್ಳಯ್ಯನನ್ನು ರಟ್ಟೆ ಹಿಡಿದು ಎಳೆದರು; "ಬಾರಯ್ಯ ಒಳಕ್ಕೆ" ಎಂದರು.

"ಇದೆಲ್ಲಾ ಹೊಟ್ಟೆ ತುಂಬಿದೋರಿಗೆ ಬುದ್ಧಿ, ನಮಗ್ಯಾಕೆ" ಎಂದು ಕುಳ್ಳಯ್ಯ ಮುಂದಕ್ಕೆ ಕಾಲು ಹಾಕಿದ.

ಇನ್ನೂ ಮುಂದಕ್ಕೆ ಹೋದಾಗ ಕೆಲವು ಅಂಗಡಿಗಳು ಸಿಕ್ಕಿದುವು. ಅಲ್ಲೊಂದು ಸಣ್ಣ ತಗಡಿನ ಪೆಟ್ಟಿಗೆ ಅಂಗಡಿ. ಅದರ ಮುಂದೆ ನಿಂತ ಕುಳ್ಳಯ್ಯ.

("ಬೀಡಿ ತಗೊಳ್ಳಲಾ?" – "ಛೆ ಛೆ, ಮಕ್ಕಳು ಹಸಿದಿರತವೆ, ಮಕ್ಕಳಿಗೆ ಏನಾರ ತಕೋಬೇಕು.")

"ಏನಾರ ತಿಂಡಿ ಕೊಡಯ್ಯ, ಮೂರು ಕಾಸಿಗೆ."

"ಮೂರು ಕಾಸಿಗೆ ಏನು ಬರ್‍ತದಯ್ಯ? ಒಂದು ಬಿಸ್ಕತ್ತು ಕೊಡಲಿಯಾ?"

"ಬಾಳೀಹಣ್ಣು ಕೊಡಯ್ಯ ಒಂದು, ಒಸಿ ಕೆಟ್ಟುಹೋಗಯ್ತಲ್ಲ ಅದು."

"ಅರ್ಧಾಣೆ ಆಗುತ್ತೆ ಕಣಲಾ."

"ಹ್ಞೂ, ಏನಾರ ಕೊಡಯ್ಯ" ಎಂದು ಕುಳ್ಳಯ್ಯ ತನ್ನ ಕೈಲಿದ್ದ ಮೂರು ಕಾಸಿನ ಬಿಲ್ಲೆಯನ್ನು ಅಂಗಡಿಯವನ ಕೈಗೆ ಹಾಕಿದ. ಅಂಗಡಿಯವನು ಎರಡು ಪೆಪ್ಪರಮೆಂಟುಗಳನ್ನು ಕೊಟ್ಟ."

"ಮೂರು ಮಕ್ಕಳವೆ ಮಾರಾಯ. ಇನ್ನೊಂದು ಕೊಡಪ್ಪ."

ಅಂಗಡಿಯವನು ಗೊಣಗುತ್ತ ಇನ್ನೊಂದು ಅರೆಮುರಿದ ಪೆಪ್ಪರಮೆಂಟನ್ನು ಕೊಟ್ಟನು. ಕುಳ್ಳಯ್ಯ ಪೆಪ್ಪರಮೆಂಟನ್ನು ಜೇಬಿಗೆ ಹಾಕಿಕೊಂಡು ನಿಧಾನವಾಗಿ ನಡೆಯುತ್ತ ಬಸವನಗುಡಿಯ ಕಡೆ ನಡೆದುಹೋದನು.

ದಾರಿಯಲ್ಲಿ ಸಿಕ್ಕಿದ ಮೊದಲನೆಯ ಮನೆಯ ಮುಂದೆ ನಿಂತು –"ಅವ್ವಾ, ಒಸಿ ಅನ್ನ ಕೊಡಿರವ್ವಾ" ಎಂದು ಗೋಗರೆದು ಕೇಳಿದನು.

ಬಾಗಿಲಿನಲ್ಲಿಯೇ ನಿಂತಿದ್ದ ಮನೆಯಾಕೆ –

"'ಕವಳಾ ತಾಯಿ'ಗಳೆಲ್ಲ ಎಂಟು ಒಂಬತ್ತರಮೇಲೆ ಬರುತ್ತಾರಪ್ಪ. ಆಗ ಬಂದರೆ ಮಿಕ್ಕ ತಂಗಳೊ ಬೆಂಗಳೊ ಹಾಕಬಹುದು. ನಮಗೇ ಇನ್ನೂ ಊಟವಿಲ್ಲ. ಮುಂದಕ್ಕೆ ಹೋಗಪ್ಪ."

ಒಳ್ಳೆಯ ಮಾತಾಡಿದಳಲ್ಲಾ ಎಂದು ಅಷ್ಟೇ ತೃಪ್ತಿ ಕುಳ್ಳಯ್ಯನಿಗೆ. ಕೆಲವು ಮನೆಗಳ ಮುಂದೆ ಬಿರುನುಡಿಗಳನ್ನೂ ತಿನ್ನಬೇಕಾಯಿತು. ಹಾಗೆಯೇ ಕಾಲೆಳೆದುಕೊಂಡು ಬಸವಣ್ಣನ ಗುಡಿಗೆ ಹೋದ. ಗುಡಿಯ ಪಕ್ಕದ ನಲ್ಲಿಯಲ್ಲಿ ಹೊಟ್ಟೆತುಂಬ ನೀರು ಕುಡಿದು, ಗುಡಿಯ ಜಗಲಿಯ ಮೇಲೆ ಬಂದು ಮಲಗಿದ. ಮಕ್ಕಳ ನೆನಪೂ ಅಳಿಸಿಹೋಯಿತು. ಸೋತ ಜೀವಕ್ಕೆ ಚೆನ್ನಾಗಿ ನಿದ್ದೆ ಹತ್ತಿಬಿಟ್ಟಿತು.

× × × ×

ಮಧ್ಯರಾತ್ರಿಯ ಮೇಲೆ ಆಗಿಹೋಗಿದೆ. ಬಸವನಗುಡಿಯ ಕೊನೆ ಕೊನೆಯ ರಸ್ತೆಯೊಂದರಲ್ಲಿ ಶ್ರೀನಿವಾಸರಾಯರ ಮನೆ. ಶ್ರೀಮಂತರಲ್ಲದಿದ್ದರೂ ತಕ್ಕಮಟ್ಟಿಗೆ ಅನುಕೂಲಸ್ಥರು. ಮನೆಯವರೆಲ್ಲ ಗಾಢನಿದ್ರೆಯಲ್ಲಿ ಮುಳುಗಿ ದ್ದಾರೆ. ಆ ಮನೆಯವರೇನು, ನಗರವೇ ನಿದ್ರಿಸುತ್ತಿದೆ. ಬೀದಿಯಲ್ಲಿ ತಿರುಗಾಡು ವವರೆಂದರೆ, ಸಿನೀವಾದ ರಾತ್ರಿಯ ಪ್ರದರ್ಶನದಿಂದ ಹಿಂತಿರುಗುತ್ತಿರುವವರು, ಗಸ್ತು ತಿರುಗುವ ಪೋಲೀಸಿನವರು, ಬಹುಶಃ ಅಲ್ಲಿ ಇಲ್ಲಿ ಕಳವು ಮಾಡಲು ಹೊಂಚು ಹಾಕುತ್ತಿರುವ ಕಳ್ಳರು. ಆದರೆ, ಆಗ ಈ ಬೀದಿಯಲ್ಲಿ ಯಾರೂ ತಿರುಗಾಡುತ್ತಿರಲಿಲ್ಲ. ಸಾಕಿದ ನಾಯಿಗಳು ಕೂಡ ಚೆನ್ನಾಗಿ ನಿದ್ರೆ ಮಾಡು ವುದನ್ನೆ ಕಲಿತು ಗಾಢ ನಿದ್ರೆಯಲ್ಲಿ ಮುಳುಗಿದ್ದುವು. ಯಾವುದೋ ಆಚೆಯ ಬೀದಿಯಲ್ಲಿ ಅಳುವಂತೆ ಕೂಗುತ್ತಿದ್ದ ನಾಯಿಯ ಕೂಗು ಅಸ್ಪಷ್ಟವಾಗಿ ಕೇಳಿ ಬರುತ್ತಿತ್ತು ; ವಿದ್ಯುದ್ದೀಪದ ಕಂಬದ ತಂತಿಯ ಮೇಲೆ ಗೂಬೆಯೊಂದು ಕುಳಿತು ಗೂಗೂ ಎಂದು ಕೂಗುತ್ತಿದ್ದಿತು. ಈ ಕೂಗುಗಳು ರಾತ್ರಿಯ ಮೌನವನ್ನು ನೂರ್ಮಡಿಮಾಡುತ್ತಿದ್ದುವು. ಶುಕ್ಲಪಕ್ಷದ ರಾತ್ರಿಯ ಚಂದ್ರ ಸಂದಿಗೊಂದಿ ಗಳಿಗೆಲ್ಲಾ ನಸುಬೆಳಕು ಚೆಲ್ಲಿದ್ದನು; ಬೀದಿಯ ದೀಪಗಳು ಉರಿಯುತ್ತಲೇ ಇದ್ದುವು. ಪಳಗಿದ ಕಳ್ಳರಿಗೆ ಅನುಕೂಲ ಸನ್ನಿವೇಶ, ಹೊಸಬರಿಗೆ ಉತ್ತೇಜಕ ಸನ್ನಿವೇಶ.

ಶ್ರೀನಿವಾಸರಾಯರ ಮನೆಯ ಅಡುಗೆಯ ಕೋಣೆ ಕನ್ಸರ್ವೆನ್ಸಿ ಗಲ್ಲಿಯ ಕಡೆಗಿದ್ದಿತು ; ಗಲ್ಲಿಯ ಕಡೆಗೇ ಎರಡು ಕಿಟಕಿಗಳು ; ಒಂದರ ಬಾಗಿಲು ತೆರೆ ದಿದ್ದು, ಒಳಗೆ ದೀಪ ಹಚ್ಚಿದ್ದುದು ಗಲ್ಲಿಯಲ್ಲಿ ಕಾಣಬರುತ್ತಿದ್ದಿತು. ದೀಪ ಆರಿಸುವುದನ್ನು ಮರೆತು ಮಲಗಿದ್ದಾರೆ ಎಂದು ಯಾವ ದಡ್ಡನಾದರೂ ಊಹಿಸ ಬಹುದಾಗಿದ್ದಿತು.

× × × ×

ಶ್ರೀನಿವಾಸರಾಯರ ಮನೆಯ ಬೀದಿಯಲ್ಲಿ ಇದ್ದಕ್ಕಿದ್ದಂತೆ 'ಕಳ್ಳಾ, ಕಳ್ಳಾ' ಎಂಬ ಕೂಗು ಎದ್ದಿತು. ಅದು ಮೊದಲಿಗೆ ಒಬ್ಬನ ಗಟ್ಟಿಯಾದ ಕರೆಕೂಗು : ಶ್ರೀನಿವಾಸರಾಯರ ಮನೆಯ ಆಳಿನದು. ಮಳೆಗಾಲದಲ್ಲಿ ಅಲ್ಲಿಂದ ಇಲ್ಲಿಂದ ಎಲ್ಲೆಲ್ಲಿಂದಲೂ ಹೊಸ ನೀರು ಬಂದು ಹೊಳೆ ಕೊಬ್ಬುವಂತೆ, ಕ್ಷಣಮಾತ್ರದಲ್ಲಿ ಎಂಟು ಹತ್ತು ಕೊರಲುಗಳು ಸೇರಿ ಒಕ್ಕೊರಲಾಗಿ 'ಕಳ್ಳಾ,

ಕಳ್ಳಾ' ಎಂಬ ಕೂಗು ಬೀದಿಯ ಇರುಳ ಮೌನದ ಕಡಲನ್ನು ಕಲಕಿತು; ಗದ್ದಲದ ಹುಯಿಲಿ ತೆರೆಗಳೆದ್ದುವು. ಅನೇಕ ಮನೆಗಳವರು ಎಚ್ಚತ್ತರು; ಕಟ್ಟುಮುಟ್ಟಾದ ಗೃಹಸ್ಥರು, ಯುವಕರು, ಶ್ರೀಮಂತರ ಮನೆಗಳ ಆಳುಗಳು ಎಲ್ಲರೂ ಬೀದಿಯಲ್ಲಿ ಗುಂಪುಕೂಡಿದರು. ಕೈಕಾಲು ಬಲವಾಗಿದ್ದವರು ಕಳ್ಳನನ್ನು ಹಿಡಿಯಲು ದಡದಡ ಬಡಬಡನೆ ನಾಲ್ಕು ದಿಕ್ಕುಗೂ ಓಡಿಹೋದರು.

ಒಂದೆರಡು ನಿಮಿಷಗಳಾದ ಮೇಲೆ, ಇದ್ದಕ್ಕಿದ್ದ ಹಾಗೆಯೇ "ಸಿಕ್ಕಿದಾ ಸಿಕ್ಕಿದಾ, ಕಳ್ಳ ಸಿಕ್ಕಿದ" ಎಂಬ ಕೂಗು ಎದ್ದಿತು.

ಈ ನಡುವೆ ಶ್ರೀನಿವಾಸರಾಯರ ಹೆಂಡತಿ ಗಂಡನನ್ನು ಜೊತೆಗೆ ಕರೆದು ಬಚ್ಚಲಮನೆಗೆ ಹೋದರು. ಅಡಿಗೆಯ ಮನೆಯ ಬಾಗಿಲು ತೆರೆದಿತ್ತು; ದೀಪ ಉರಿಯುತ್ತಿತ್ತು. ಅಡಿಗೆಯ ಮನೆ, ಬಚ್ಚಲ ಮನೆ, ಸೌದೆ ಇದ್ದಲ ಕೋಣೆ ಇವೆಲ್ಲ ಸೇರಿ ಒಂದು 'ಔಟ್ ಹೌಸ್' (ಹಿನ್ಮನೆ) ಆಗಿತ್ತು; ಇದಕ್ಕೂ ಮುಂಭಾಗದ ಕಟ್ಟಡಕ್ಕೂ ನಡುವೆ ಸ್ವಲ್ಪ ಅಂಗಳ; ಒಂದು ಪಕ್ಕದಲ್ಲಿ ಒಂದು ಎತ್ತರವಾದ ಗೋಡೆ, ಅದಕ್ಕೆ ಒಂದು ಬಾಗಿಲು, ಆ ಬಾಗಿಲೂ ತೆರೆದಿತ್ತು. ತಮ್ಮ ಮನೆಯಲ್ಲೇ ಕಳ್ಳತನ ಆಗಿದೆಯೆಂದು ಗಂಡ ಹೆಂಡಿರಿಬ್ಬರಿಗೂ ಖಚಿತವಾಯಿತು. ಇಬ್ಬರೂ ಮೊದಲು ಅಡಿಗೆಯ ಮನೆಯೊಳಕ್ಕೆ ಧಾವಿಸಿ, ಪರೀಕ್ಷಿಸಿದರೂ ಪಾತ್ರೆ ಪರಟೆ ಸಾಮಾನುಗಳೆಲ್ಲಾ ಇದ್ದ ಕಡೆಯೇ ಇದ್ದುವು. ಅಲ್ಲಲ್ಲೆ ಸ್ವಲ್ಪ ಅಕ್ಕಿ ಚೆಲ್ಲಾಡಿತ್ತು. "ಅಲ್ಲಾ, ಎಂದೂ ಇಲ್ಲದ್ದು ಇವೊತ್ತು ಅಡಿಗೆಯ ಮನೆಗೆ ಬೀಗ ಹಾಕಿಕೊಳ್ಳುವುದನ್ನೇ ಮರೆತುಬಿಟ್ಟೆನೇ! ಬೆಳ್ಳಿ ತಟ್ಟೆಗಳನ್ನೂ ಇಲ್ಲೇ ಬಿಟ್ಟುಬಿಟ್ಟದ್ದೇನೆ! ದೇವರ ದಯದಿಂದ ಅವನ್ನು ತೆಗೆದುಕೊಂಡಿಲ್ಲ!" ಎಂದು ಶ್ರೀನಿವಾಸರಾಯರ ಹೆಂಡತಿ ಪದ್ಮಮ್ಮನವರು ಉದ್ಗಾರ ತೆಗೆದರು. "ಅಪ್ಪಾ ಅಪ್ಪಾ, ಕಳ್ಳ ಸಿಕ್ಕಿದ್ದಾನೆ" ಎಂದು ಆಗ ಅವರ ಮಗ ಓಡಿಬಂದನು. ಎಲ್ಲರೂ ಮನೆಯ ಮುಂದಕ್ಕೆ ಧಾವಿಸಿದರು.

ಮನೆಯ ಮುಂದೆ ಜನರ ಗುಂಪು ನೆರೆದುಬಿಟ್ಟಿತ್ತು. ವರಾಂಡದಲ್ಲೂ ಹಿಡಿಯುವಷ್ಟು ಜನ ಕಳ್ಳನನ್ನು ಸುತ್ತುಗಟ್ಟಿ ನಿಂತಿದ್ದರು. ಒಬ್ಬಾತ ಟವಲನ್ನು ತಿರಿಮಾಡಿ, ಕಳ್ಳನ ತೋಳಿಗೆ ಕುಣಿಕೆ ಹಾಕಿ ಹಿಡಿದಿದ್ದನು. ಮನೆಯ ಆಳು ತಿಮ್ಮ ಅವನ ಇನ್ನೊಂದು ತೋಳನ್ನು ಹಿಡಿದಿದ್ದನು. ಬೈಗಳ ಮಳೆ, ಏಟಿನ

ಮಳೆ ಎಲ್ಲ ಸುರಿದು ಮುಗಿದಿದ್ದರೂ, ಶ್ರೀನಿವಾಸರಾಯರ ಮುಂದೆ ಮತ್ತೆ ಅವುಗಳ ಪ್ರದರ್ಶನಕ್ಕೆ ಮೊದಲಾಯಿತು. "ಅಯ್ಯೋ ಅಯ್ಯೋ, ಅಪ್ಪಾ! ಬಿಡಿರೋ! ನಾನು ಸತ್ತೆ! ಹೆಂಡತಿ ಮಕ್ಕಳು ಉಪಾಸ ಅವ್ರೆ, ನಾನು ಮೂರು ಜಿನದಿಂದ ಉಪಾಸ. ಹೊಟ್ಟೆಗಿಲ್ದೆ ಬಂದೆ, ಬಿಡ್ರಪ್ಪಾ ನಿಮ್ಮ ದಮ್ಮಯ್ಯಾ!" ಎಂದು ಕಳ್ಳ ಚೀರಿಕೊಂಡನು; ಹಾಗೆಯೇ ಕುಸಿದು, ನೆಲದ ಮೇಲೆ ಉರುಳಿ ಬಿಟ್ಟನು.

"ಯಾರಾದರೂ ಪೋಲೀಸ್ ಸ್ಟೇಷನ್ನಿಗೆ ಹೋಗಿ ಒಬ್ಬ ಕಾನ್‌ಸ್ಟೇಬಲನ್ನು ಕರೆದುಕೊಂಡು ಬನ್ನಿ ಮತ್ತೆ" ಎಂದು ಪಕ್ಕದ ಮನೆಯ ಶಾಮರಾಯರು ಸಲಹೆ ಮಾಡಿದರು.

"ತಡೀರಿ ಸ್ವಲ್ಪ. ನಾನು ಎಲ್ಲ ವಿಚಾರಿಸುತ್ತೇನೆ. ಅಗತ್ಯವಾದರೆ, ನಾವೇ ಸ್ಟೇಷನ್ನಿಗೆ ಕರೆದುಕೊಂಡು ಹೋದರಾಯಿತು" ಎಂದು ಶ್ರೀನಿವಾಸರಾಯರು ಕಳ್ಳನ ವಿಚಾರಣೆಗೆ ತೊಡಗಿದರು:

"ಏಳೋ, ಮೇಲಕ್ಕೇಳೋ."

ಕಳ್ಳನು ಏಳಲಾರದವನಂತೆ ಎದ್ದು ನಿಂತನು; ಕೈಮುಗಿದುಕೊಂಡು, "ಇನ್ನು ಮೇಲೆ ಈ ಕೆಲಸ ಮಾಡೋಕಿಲ್ಲ. ಮಾಫಿ ಮಾಡಿ ಬಿಟ್ಟುಬಿಡಿ ಬುದ್ದಿ" ಎಂದು ಬೇಡಿಕೊಂಡನು.

"ಇರಲಿ, ನಿನ್ನ ಹೆಸರೇನೋ?"

"ಕುಳ್ಳಯ್ಯ, ಬುದ್ದಿ."

"ಇದೇ ಊರಿನವನೇನೋ?"

"ಹ್ದೂ ಕಣ್ ಬುದ್ದಿ."

"ವಾಸ ಎಲ್ಲೋ?"

"ಗಾಣಿಗರಪೇಟೆ, ಬುದ್ದಿ."

"ಎಷ್ಟು ದಿನದಿಂದಲೋ ಈ ಕಳ್ಳತನ?"

"ಇವತ್ತೆ ಮೊದಲು, ಬುದ್ದಿ."

("ಅದಕ್ಕೇ ಸಿಕ್ಕಿಬಿದ್ದ." ಎಂದರು, ಯಾರೋ ಗುಂಪಿನಲ್ಲಿದ್ದವರು")

"ಎಲ್ಲಿ ಕೆಲಸ ಮಾಡುತ್ತೀಯೋ?"

"ಈಗ ಮೂರು ತಿಂಗಳಿಂದ ಕೆಲಸ ಇಲ್ಲ, ಬುದ್ದಿ."

" ಅದಕ್ಕೆ ಮೊದಲು ?"

" ಅದ್ಯಾವುದೋ ಸೋಪ್ ಫ್ಯಾಕ್ಟರೀಲಿ ಐದು ವರ್ಷ ಕೆಲ್ಸ ಮಾಡ್ದೆ ಬುದ್ಧಿ. ಫ್ಯಾಕ್ಟರೀಗೆ ನಷ್ಟ ಅಂತ ಕೆಲವರ್ನ ಕೆಲಸದಿಂದ ತೆಗೆದುಹಾಕಿದ್ರು. ನನ್ನೂ ತೆಗೆದ್ರು. ಯುದ್ಧ ಸುರು ಆಯ್ತು ನೋಡಿ, ಆಗ ಒಂದು ವರ್ಷ ಯಾವುದೂ ಕೆಲಸ ಇರ್ನಿಲ್ಲ. ಆದ್ರೆ ಕೂಲಿ ಪಾಲಿ ಚೆಂದಾಗಿ ಸಿಕ್ತಿದ್ದೋ. ಆಮೇಲೆ ಯಾರೋ ನಿಮ್ಮಂತ ಪುಣ್ಯಾತ್ಮರು ಬಿನ್ನಿಮಿಲ್ಲಿನಲ್ಲಿ ಕೆಲ್ಸ ಕೊಡಿಸಿದ್ರು. ಅಲ್ಲಿ ಕೂಲಿಯೋರು ಗುಂಪು ಕಟ್ಟಿಕೊಂಡು ಒಂದು ಸಲ ಅದೇನೋ ಅಂತಾರಲ್ಲ ಸಾವಿ....ತಕರಾರು....ಅದು ಮಾಡಿದರು. ನಾನೂ ಆ ಗುಂಪಿಗೆ ಸೇರಿದ್ದೆ ಅಂತ ನನ್ನ ಕೆಲಸದಿಂದ ತೆಗೆದುಬಿಟ್ರು. ಆಮೇಲೆ ಮತ್ತೆ ಆರು ತಿಂಗಳು ವನವಾಸ ಪಟ್ಟೆ ಬುದ್ಧಿ. ಆಮೇಲೆ ಯಾರ್ದೋ ಬಂಗ್ಲೇಲಿ ಕೆಲ್ಸ ಮಾಡಿ ಕೊಂಡಿದ್ದೆ. ತೋಟದ ಕೆಲ್ಸ ಚೆಂದಾಗಿ ಬರದು ಅಂತ ಬಿಡಿಸಿಬಿಟ್ರು. ಹಿಂಗೇ ನಡೀತು ಬುದ್ಧಿ ಮೂರು ನಾಕು ವರ್ಷ, ಅಲ್ಲಿ ಆರು ತಿಂಗಳು, ಇಲ್ಲಿ ಮೂರು ತಿಂಗಳು. ನಾಕೈದು ವರ್ಷ ಮಕ್ಕಳೇ ಇರಲಿಲ್ಲ. ಆಮೇಲೆ ಒಂದರ ಹಿಂಗುಟ್ಟೆ ಒಂದು ಮೂರು ಮಕ್ಕಳಾದೋ. ಸರಿಯಾದ ಚಾಕ್ರಿ ಮಾತ್ರ ಎಲ್ಲೂ ಇಲ್ಲ. ಮಂಡಿ ತಾವು, ಬಸ್‌ಸ್ಟ್ಯಾಂಡ್ ತಾವು, ಮಾರ್ಕೆಟ್ ತಾವು ಕೂಲಿಗೀಲಿ ಮಾಡಿ ಹೊಟ್ಟೆ ಹೊರೀತಾ ಇದೀನಿ ಬುದ್ಧಿ ಈಗ. ನೀವು ನಿಜ ಹೇಳಿದರೂ ನಂಬ್ತೀರ, ಸುಳ್ಳು ಹೇಳಿದ್ರೂ ನಂಬ್ತೀರ– ನಿನ್ನೆ ಮೊನ್ನೆ ಒಂದು ಕಾಸು ಕೂಲೀನೂ ಸಿಕ್ಕಿಲ್ಲ ಬುದ್ಧಿ. ಈ ಸಂಜೆ ಬಿಕ್ಸ ಕೂಡ ಮಾಡ್ದೆ ಬುದ್ಧಿ. ಕಡಿದರೆ ನಾಲ್ಕಾಳಾಗ್ತೀಯ, ಕೂಲಿ ಮಾಡು ಅಂತಾರೆ. ಕೂಲಿ ಮಾಡೋ ಕಡೆ ಹಂಗೈತೆ. ಗೇಯೋಣ ಅಂದ್ರೆ ಕೆಲ್ಸ ಕೊಡೋರಿಲ್ಲ. ಹೆಂಡತಿ ಮಕ್ಕಳು ಮೂರು ದಿನದಿಂದ ಉಪಾಸ. ಏನು ಮಾಡ್ಲಿ, ಎಂಗೆ ಬರೀ ಕೈಲಿ ಮನೇಗೆ ಹೋಗಲಿ ಅಂತಲೇ ಇದ್ದೆ. ಬಸವಣ್ಣನ ಗುಡಿ ಜಗಲಿ ಮೇಲೆ ಮಲಗಿದ್ದೆ. ಆಗ ಯಾರೋ ನಿದ್ದೇ ಒಳಗೆ " ಕಳ್ತನಾನಾದ್ರೂ ಮಾಡಿ ಮಕ್ಕಳ ಹೊಟ್ಟೆಗೆ ಹಾಕು " ಅಂದಹಾಗಾಯ್ತು. ಸರಿ, ಎದ್ದು ಈ ಕಡೆ ಬಂದೆ. ಕಳ್ಳತನ ಮಾಡೋದು ಹೇಳೋ ಅಷ್ಟು ಸುಲಬಾನ ? ಎಂಗೆ ಕನ್ನ ಹಾಕೋದು ? ನನ್ನ ಹತ್ರ ಏನೂ ಹತ್ಯಾರಿಲ್ಲ. ಬರೀ ಕೈಯಿ, ಉಪಾಸ ಬೇರೆ. ಹಾಗೇ ಬರ್‍ತಾ ಇರಬೇಕಾದ್ರೆ ನಿಮ್ಮನೆ ಹಿಂಗಡೆ ಗ್ಲಲ್ಲಿ ಐತಲ್ಲಾ, ದೀಪ ಕಂಡ್ತು. ಮೆತ್ತಗೆ

ಸಿಗರಿ ಸಿಂತೆ, ಕಿಟಕಿ ಇಂದ ನೋಡ್ದೆ. ಅಡಿಗೆ ಮನೆ. ಹಸಿದಿರೋ ಮಕ್ಕಳ ನೆಪ್ಪಾಯ್ತು. ಭೋ ಕಷ್ಟ ಬಿದ್ದು ಕಾಂಪೋಂಡು ಗೋಡೆ ಹತ್ತಿದೆ. ಭಾಳ ಎತ್ತರ ಬುದ್ಧಿ, ನಿಮ್ಮನೆ ಕಾಂಪೋಂಡು, ಹಿತ್ತಲ ಕಡೇದು. ನೋಡ್ತೀನಿ, ಆಡಿಗೆ ಮನೆ ಬಾಕಲೇ ತೆಗೆದೈತೆ! ಇನ್ನೇನಾಗಬೇಕು? ಪಾತ್ರೆ ಗೀತ್ರೆ ಒಂದೂ ಮುಟ್ನೆಲ್ಲ ಬುದ್ಧಿ. ತಿಂಡಿ ಗಿಂಡಿ ಸಿಕ್ತದೇನೋ ಅಂತ ತಡಕಾಡ್ದೆ. ಏನೂ ಸಿಕ್ನೆಲ್ಲ. ಡಬ್ಬಾದಲ್ಲಿ ಅಕ್ಕಿ ತುಂಬಿತ್ತು. ತಲೆ ಚೌಕ ಬಿಚ್ಚಿ ಅಕ್ಕಿ ತುಂಬಿ ಕಟ್ಕೆಕೊಂಡೆ. ಇದೇ ನೋಡಿ, ಅಕ್ಕಿ ಗಂಟು. ಬರೋ ಆತುರದಲ್ಲಿ ಒಂದು ಪಾತ್ರೆ ಎಡವಿಬುಟ್ಟೆ. ನಿಮ್ಮ ಆಳು ಹೊರಗೇ ಮನಗಿದ್ದ. ನಾನು ನೋಡಿರ್ನಿಲ್ಲ. ಎಚ್ಚರವಾಗಿ, "ಏ ಯಾರದು" ಎಂತ ಕೂಗಿಕೊಂಡ. ನಾನು ಓಟ ಕಿತ್ತೆ. ಕಾಂಪೋಂಡು ಹಾರೋವಾಗ ನಿಮ್ಮ ಆಳು ನೋಡ್ದ. ನಾನು ಬಿದ್ದಿದ್ದೋನು ಮೇಲಕ್ಕೆದ್ದು ಓಡೋಕೆ ಹೋದೆ. ಕಾಲೆಲ್ಲ ಸೋತಿದ್ವು. ಆದ್ರೂ ಓಡಿದೆ. ಕೊನೆಗೆ ಸಿಕ್ಕಿಬಿದ್ದೆ ಬುದ್ಧಿ. ನಿಮ್ಮ ಅಕ್ಕಿ ಇಕೋ ತಗೊಳ್ಳಿ. ಇನ್ನು ಮೇಲೆ ಇಂತ ಕೆಲ್ಸಕ್ಕೆ ಕೈಹಾಕೋಕಿಲ್ಲ. ಉಪಾಸ ಸತ್ರೂ ಸರಿ, ಕದಿಯೋಕಿಲ್ಲ. ನಿಮ್ಮ ಪಾದಕ್ಕೆ ಬಿದ್ದೆ, ಮಾಫಿ ಮಾಡಿ" ಎಂದು ಶ್ರೀನಿವಾಸರಾಯರ ಕಾಲು ಗಳ ಮೇಲೆ ಅಡ್ಡಬಿದ್ದನು.

ಶ್ರೀನಿವಾಸರಾಯರು ಅವನ ಕಥೆಯನ್ನು ನಂಬಿದರೆಂದು ಕಾಣುತ್ತದೆ:

"ಹಾಳಾಗಿ ಹೋಗಲಿ ಬಿಟ್ಬುಬಿಡಿ ಪಾಪ" ಎಂದು ಶ್ರೀನಿವಾಸರಾಯರು ತೀರ್ಪಿತ್ತರು.

"ಹಾಗೆಲ್ಲ ಬಿಡಬಾರದು ಸಾರ್. ಸುಳ್ಳು ಕಥೆ ಕಟ್ಟಿ ಹೇಳಿದ್ದಾನೆ. ಪೋಲೀಸಿಗೆ ಕೊಟ್ಬುಬಿಡಿ. ಅವರು ವಿಚಾರಣೆ ಮಾಡಿ ಬಿಡಲಿ, ಬೇಕಾದರೆ" ಎಂದು ಯಾರೋ ಸಲಹೆ ಮಾಡಿದರು.

ಈ ಮಧ್ಯೆ ತಿಮ್ಮ ಅಕ್ಕಿಯನ್ನು ಒಂದು ಮೊರಕ್ಕೆ ಸುರಿದುಕೊಂಡು, ಕುಳ್ಳಯ್ಯನ ಚೌಕವನ್ನು ಅವನ ಹೆಗಲಮೇಲೆ ಹಾಕಿದನು. "ಇನ್ನೇನೂ ತಕೊಂಡಿಲ್ಲವೇನೋ" ಎಂದು ಮೈಯನ್ನೆಲ್ಲಾ ತಡವಿದನು.

"ಎಲ್ಲಾದರೂ ಬೀಡಿ ತುಂಡು ಸಿಕ್ಕಿದರೆ ಸೇದೋಣ ಅಂತ ಈ ಬೆಂಕಿ ಪೊಟ್ಣ ತಕೊಂಡೆ ಕಣಪ್ಪ, ಇನ್ನೇನೂ ಇಲ್ಲ. ಮಕ್ಕಳಿಗೆ ಅಂತ ಮೂರು

ಪೆಪ್ಪರಮೆಂಟು ಕೊಂಡುಕೊಂಡಿದ್ದೆ. ಅಷ್ಟೆ, ಇನ್ನೇನಿಲ್ಲ" ಎಂದು ಕುಳ್ಳಯ್ಯ ಬೆಂಕಿ ಪೊಟ್ಟಣ ತೆಗೆದು ಹಿಂದಿರುಗಿಸಹೋದನು.

"ಹೋಗ್ಲಿ, ನೀನೇ ಮಡಿಕ್ಕೊ. ಇಷ್ಟು ಕಷ್ಟ ಬಿದ್ದಿದೀಯಾ, ಅಷ್ಟಾದರೂ ಬೇಡವಾ" ಎಂದು ನಗುತ್ತ ಹೇಳಿದ ತಿಮ್ಮ.

"ಇವೊತ್ತಿಗೆ ಬದುಕಿಕೊಂಡೆ, ಹೋಗಾಚೆ ಭಡವಾ" ಎಂದು ಯಾವನೋ ಕುಳ್ಳಯ್ಯನ ಬೆನ್ನಿನ ಮೇಲೆ ದಬದಬ ಗುದ್ದಿದನು.

"ಬಿಟ್ಟಾಯಿತು. ಯಾಕೆ ಸುಮ್ಮನೆ ಹೊಡೆಯುತ್ತೀರಿ ಪಾಪ" ಎಂದು ಶ್ರೀನಿವಾಸರಾಯರು ಗುಂಪಿಗೆ ಶಿಫಾರಸು ಮಾಡಿದರು.

ಕುಳ್ಳಯ್ಯನಿಗೆ ಗುಂಪಿನ ಬಂಧನದಿಂದ ಬಿಡುಗಡೆಯಾಯಿತು. ಶ್ರೀನಿವಾಸರಾಯರ ಕರುಣೆ ಕುಳ್ಳಯ್ಯನ ಮನಸ್ಸನ್ನು ಕಲಕಿತು. ಆದರೂ ಮಕ್ಕಳ ಉಪವಾಸದ ನೆನಪಾಗಿ, "ಅಕಟಕಟ, ಶಿವ ನಿನಗಿನಿತು ಕೃಪೆಯಿಲ್ಲ" ಎಂಬ ನುಡಿಗಳನ್ನೂ ನುಡಿದನು.

× × × ×

ಕುಳ್ಳಯ್ಯ ಅದು ಹೇಗೋ ಕಾಲನ್ನೆಳೆದುಕೊಂಡು ಮನೆಯನ್ನು ತಲುಪಿದನು. ಎರಡು ಮೂರು ಸಲ ಬಾಗಿಲನ್ನು ತಟ್ಟಿದ. ಹೆಂಡತಿ ಬಂದು ಬಾಗಿಲು ತೆರೆಯಲಿಲ್ಲ. ಹೊಟ್ಟೆಗಿಲ್ಲದೆ ಬಳಲಿ ಬೇಸತ್ತು ನಿದ್ದೆಯಲ್ಲಿ ಮುಳಗಿರಬೇಕೆಂದು ಊಹಿಸಿದ. ಹೆಂಡತಿಯ ಹೆಸರು ಹಿಡಿದು ಮೂರು ನಾಲ್ಕು ಸಲ ಕೂಗಿದ. ಹೆಂಡತಿಗೆ ಎಚ್ಚರವಿಲ್ಲ. ಬಾಗಿಲನ್ನು ಸ್ವಲ್ಪ ಬಲವಾಗಿ ತಟ್ಟಿದ. ಹಳೆಯ ಕಾಲದ ಚಿಲಕ ಕಳಚಿಕೊಂಡು, ಬಾಗಿಲು ತಾನಾಗಿ ತೆರೆಯಿತು. ಒಳಗೆ ಕಗ್ಗತ್ತಲೆ. (ಬೀದಿಯಲ್ಲಿ – ಆ ಗಲ್ಲಿಯಲ್ಲಿ – ದೀಪದ ಕಂಬ ಎಲ್ಲೋ ದೂರದಲ್ಲಿದ್ದಿತು). ನೆಪ್ಪಿನ ಮೇಲೆ ಮುಂದಕ್ಕೆ ನಡೆದ. ಎದ್ದು ನಿಂತ ಹೆಂಡತಿಯನ್ನು ಮುಂದಕ್ಕೆ ದಬ್ಬಿದ ಹಾಗೆ ಅವನಿಗೆ ಭಾಸವಾಯಿತು. "ಕತ್ತಲೆ ಕಣೇ, ಕಾಣ ವೊಲ್ಲದು" ಎಂದು ಜೇಬಿನಲ್ಲೆ ಇದ್ದ ಬೆಂಕಿ ಪೊಟ್ಟಣ ತೆಗೆದುಕೊಂಡು ("ದೇವರ ದಯದಿಂದ ಬೆಂಕಿಯ ಪೊಟ್ಟಣ ಐತೆ") ಒಂದು ಕಡ್ಡಿ ಗೀರಿದ. ದೀಪದ ಬೆಳಕಿನಲ್ಲಿ ಮಕ್ಕಳು ಅಸ್ತವ್ಯಸ್ತವಾಗಿ ಮಲಗಿದ್ದುದು ಕಂಡುಬಂದಿತು. ಆರಿಹೋಗಿದ್ದ ದೀಪದ ಬುಡ್ಡಿಯನ್ನು ಇನ್ನೊಂದು ಕಡ್ಡಿ ಗೀರಿ ಹೊತ್ತಿಸಿದ. ಬುಡ್ಡಿಯ ಬೆಳಕಿನಲ್ಲಿ ಅವನು ಕಂಡದ್ದೇನು?

ಹೆಂಡತಿ ಹಗ್ಗದಲ್ಲಿ ನೇತಾಡುತ್ತಿದ್ದಳು!

ಮಕ್ಕಳು ದೀರ್ಘ ನಿದ್ರೆಯಲ್ಲಿ ಮಲಗಿದ್ದುವು!

"ಎಂಥ ಕೆಲಸ ಮಾಡಿದೆಯೇ ಬೊಡ್ಡೀ‌ೕೕ" ಎಂದು ಕುಳ್ಳಯ್ಯ ಹೆಣವನ್ನು ಬಲವಾಗಿ ಒದೆದ.

"ಕಳಬೇಡ, ಕೊಲಬೇಡ, ಹುಸಿಯ ನುಡಿಯಲು ಬೇಡ...."

"....ಅಕಟಕಟ, ಶಿವ ನಿನಗಿನಿತು ಕೃಪೆಯಿಲ್ಲ...."

ಈ ನುಡಿಗಳು ಕುಳ್ಳಯ್ಯನ ಮನಸ್ಸಿನಲ್ಲಿ ಭೋರ್ಗರೆದುವು.

"ನಾನು ಮಾಡಬೇಕಾದ ಕೆಲ್ಸ ನೀನು ಯಾಕೆ ಮಾಡಿದೆಯೇ, ಬೊಡ್ಡೀೕೕ" ಎಂದು ಕಿರಿಚಿ ಹೆಣವನ್ನು ಮತ್ತೆ ಬಲವಾಗಿ ಒದೆದ. ಬವಳಿ ಬಂದವನಂತೆ ನೆಲದ ಮೇಲೆ ಬಿದ್ದ.

ತುಸ ಹೊತ್ತಾದ ಮೇಲೆ ಚೇತರಿಸಿಕೊಂಡು ಎದ್ದ.

"ಬಿಡ್ತು ಕಣೇ ಬಿಡ್ತು. ಎಂಥ ಪಾಪಿ ನಾನು, ನಿನ್ನ ಒದ್ದೆನಲ್ಲೇ. ನಾ ಈ ಕೆಲ್ಸ ಮಾಡೋಕಾಗ್ತಾ ಇತ್ತ? ಕದಿಯೋಕೆ ಕೈಲಾಗದವ ಕೊಲ್ಲೋಕಾಯ್ತಿತ್ತ? ಶಿವ ನಿಂಗೆ ಒಳ್ಳೆ ಬುದ್ಧಿ ಕೊಟ್ಟ. ಶಿವಂಗೆ ನಮ್ಮ ಮೇಲೆ ತುಂಬ ಕೃಪೆ ಐತೆ. ಇನ್ನು ಯಾರಿಗೆ ಅಕ್ಕಿ ಕೊಂಡೊಯ್ತೀ ಅಂತ ತಕೊಂಡ ಅಕ್ಕೀನೂ ಅಲ್ಲೆ ಮಡಗಿಸಿಬಿಟ್ಟ. ಅವಂಗೆಲ್ಲಾ ಗೊತ್ತು. ಹಸಿದಿರೋ ಹೆಂಡರು ಮಕ್ಕಳ್ನನ್ ತಾವ್ಕೆ ಬನ್ನಿ ಅಂತ ಕರಕೊಂಡ. ಶಿವಂದು ಕೃಪೆ ಇಲ್ಲ ನಮ್ಮ ಮೇಲೆ ಅಂತ ಹೆಂಗೆ ಹೇಳಲಿ. ಭೋ ಕೃಪೆ ಅವಂದು ನಮ್ಮ ಮೇಲೆ. ಒಳ್ಳೆ ಕೆಲ್ಸ ಮಾಡ್ದೆ ಕಣ್ ಹೆಣ್ಣೆ" ಎಂದು ನೇತಾಡುತ್ತಿದ್ದ ಹೆಂಡತಿಯ ಶವವನ್ನು ತಬ್ಬಿಕೊಂಡು ಬಿಕ್ಕಿ ಬಿಕ್ಕಿ ಅಳತೊಡಗಿದ.

× × × ×

ಮಾರನೆಯ ಸಂಜೆ ಶ್ರೀನಿವಾಸರಾಯರು ಪತ್ರಿಕೆಯನ್ನೋದುತ್ತಿದ್ದಾಗ ಯಾವುದೋ ಮೂಲೆಯಲ್ಲಿದ್ದ ಈ ಚಿಕ್ಕ ಸುದ್ದಿ ಅವರ ಗಮನವನ್ನು ಸೆಳೆಯಿತು:

## ಭೀಕರ ಕೊಲೆ ಮತ್ತು ಆತ್ಮಹತ್ಯೆ!

"ಗಾಣಿಗರಪೇಟೆಯಲ್ಲಿ ವಾಸವಾಗಿರುವ ಕುಳ್ಳಯ್ಯ ಎಂಬವನು ತನ್ನ ಮೂವರು ಮಕ್ಕಳನ್ನೂ ಕತ್ತು ಹಿಸುಕಿ ಕೊಂದು, ತನ್ನ ಹೆಂಡತಿಯನ್ನು ನೇಣು

ಹಾಕಿ ಸಾಯಿಸಿ, ತಾನೂ ನೇಣು ಹಾಕಿಕೊಂಡು ಆತ್ಮಹತ್ಯೆ ಮಾಡಿಕೊಂಡಿರುವ ಪ್ರಸಂಗ ವರದಿಯಾಗಿದೆ. ಸುದ್ದಿ ತಿಳಿದ ಕೂಡಲೆ ಪೋಲೀಸರು ಧಾವಿಸಿ ಮಹಜರ್ ಕ್ರಮ ಜರುಗಿಸಿದರು. ಜೀವನದಲ್ಲಿ ಜುಗುಪ್ಸೆಗೊಂಡು ಆತ ಹೀಗೆ ಮಾಡಿರಬೇಕೆಂದು ಊಹಿಸಲಾಗಿದೆ. ಸತ್ತ ಮೂರು ಮಕ್ಕಳ ಕೈಯಲ್ಲೂ ಒಂದೊಂದು ಪೆಪ್ಪರಮೆಂಟಿತ್ತು.

"ಪೆಪ್ಪರಮೆಂಟ ?" ಎಂದು ಶ್ರೀನಿವಾಸರಾಯರು ಚಕಿತರಾದರು.

# ಅದೃಷ್ಟ ಗ್ರಹಣ

ಜೀವನವೆಂಬುದು ಒಂದು ಲಾಟರಿ ಇದ್ದ ಹಾಗೆ! ಇದು ಎಲ್ಲರೂ ಬಲ್ಲ ಉಕ್ತಿ. ಅಷ್ಟೇ ಅಲ್ಲ; ಬಹು ಜನರ ಅಭಿಪ್ರಾಯ, ಅನುಭವ. ಜೀವನದ ಮಾಯದ ಪೆಟ್ಟಿಗೆಯಲ್ಲಿ 'ಕಾಣದ ಕೈ' ಒಂದು ಏನೇನೋ ತುಂಬಿಟ್ಟದ್ದು, ಕೈನೀಡಿದ ನಮಗೆ ಕಣ್ಣು ಮುಚ್ಚಿಕೊಂಡು ಏನೇನೋ ಕೊಡುತ್ತಿರುತ್ತದೆ. ಅದು ಹಣ್ಣಾಗಿರಬಹುದು, ಹೆಣ್ಣಾಗಿರಬಹುದು; ಹೊನ್ನಾಗಿರಬಹುದು, ಮಣ್ಣಾಗಿರಬಹುದು; ಹರಳಾಗಿರಬಹುದು, ಮರಳಾಗಿರಬಹುದು. ಪಾಲಿಗೆ ಬಂದದ್ದು ಪಂಚಾಮೃತ, ಪಡೆದದ್ದು ಪರಮಾನ್ನ, ಸಿಕ್ಕಿದ್ದು ಸೀರುಂಡೆ, ಎಂದು ದೊರೆತದ್ದರಲ್ಲಿ ಸಂತೋಷಪಡುವುದೇ ವಿವೇಕ. "ಇಂದೇನೋ, ಮುಂದೇನೋ, ಮುನ್ನೆ ಆಳ್ ಕಾಣನ್. ಬಂದುದನೆ ಕೊಂಡುಂಡು ತಾಳ್ದವನೆ ಜಾಣನ್." ಇದೆಲ್ಲಾ ಗೊಡ್ಡು ವೇದಾಂತ, We are the architects of our lives ಎನ್ನುವವರು ನಿಜವಾದ ಪೌರುಷವಾದಿಗಳಲ್ಲ; ಮರಳುಗಾಡಿನಲ್ಲಿ ಚಂಡಮಾರುತವೆದ್ದಾಗ ಮರಳಿನೊಳಗೆ ಮೂತಿಯನ್ನು ಹೂತಿಟ್ಟು ತಾನು ಸುರಕ್ಷಿತವೆಂದು ಭ್ರಮಿಸುವ ಉಷ್ಟ್ರಪಕ್ಷಿಯ ನೀತಿಯವರು, ಆತ್ಮವಂಚಕರು.

ಪ್ರಾರಂಭದಲ್ಲೇ ಇದೇನು ನೀತಿಪ್ರವಚನ ಎಂದು ಬೇಸರಗೊಳ್ಳಬೇಡಿ. ನನ್ನಿಂದ ವಿಮೆ ಮಾಡಿಸುವುದಕ್ಕೆ ಬಂದಿದ್ದ ನನ್ನ ಸ್ನೇಹಿತ ಸೂರಿ ನನಗೆ ಕೊಟ್ಟ ಒಂದೆರಡು ಗಂಟೆಯ ಉಪನ್ಯಾಸದ ಸಾರಸಂಗ್ರಹವನ್ನು ನಾನು ಬಲ್ಲ ಮಾತುಗಳಲ್ಲಿ ಭಟ್ಟಿಯಿಳಿಸಿಕೊಟ್ಟಿದ್ದೇನೆ, ಅಷ್ಟೆ.

ಅವನು ನನಗೆ ಆ ಉಪನ್ಯಾಸ ಮಾಡಿದ ಸಂದರ್ಭ ಬಹು ವಿಚಿತ್ರ. ಅವನು ಅದಕ್ಕೆ ಹಿಂದೆ ಎರಡು ಮೂರು ಸಲ ವಿಮೆ ಮಾಡಿಸಲು ನನ್ನನ್ನು ಬಲಾತ್ಕಾರಪಡಿಸಿದ್ದ. ಅವನು ಇತರ ವಿಮಾ ಪ್ರತಿನಿಧಿಗಳಂತೆ ವಿಮೆ ಮಾಡುವುದರ ಆವಶ್ಯಕತೆ ಮತ್ತು ಪ್ರಯೋಜನಗಳನ್ನು ಕುರಿತು ನನ್ನ ಕಿವಿ ಕೊರೆಯಲಿಲ್ಲ. "ನೋಡು, ರಾಮು, ನಾನು ಕೆಲಸಕ್ಕೆ ರಾಜೀನಾಮೆ ಕೊಟ್ಟು ಈ ಉದ್ಯೋಗ ಕೈಗೊಂಡಿದ್ದೇನೆ. ನೀನು...." ಎಂದು ಅವನು ತೊಡಗಿದಾಗ,

ನನಗೆ ಎದೆ ಝುಗ್ ಎಂದು, "ಆ್ಞ! ಕೆಲಸಕ್ಕೆ ರಾಜೀನಾಮೆ ಕೊಟ್ಟೆಯಾ? ಯಾಕೆ? ಏನು ವಿಷಯ?" ಎಂದು ಪ್ರಶ್ನಿಸಿದೆ. ಅವನು – "ಇರಲಿ, ಅದೊಂದು ಕಥೆ. ಯಾವಾಗಲಾದರೂ ಹೇಳುತ್ತೇನೆ ವಿಮೆ ಮಾಡುವುದ ರಿಂದ ನಿನಗೆ ಪ್ರಯೋಜನವಾಗುತ್ತದೆಯೋ ಬಿಡುತ್ತದೆಯೋ. ನನಗಂತೂ ಪ್ರಯೋಜನವಾಗುತ್ತೆ, ಐದು ಸಾವಿರಕ್ಕೊಂದು ಪಾಲಿಸಿ ತೆಗೆದುಕೊ...." ಎಂದು ಸ್ಪಷ್ಟವಾಗಿ ಹೇಳಿದ. ಅವನ ಈ ನೇರವಾದ ಮಾತುಗಳಿಂದ ಅವನಲ್ಲಿ ಮೆಚ್ಚುಗೆ ಮಾತ್ರವಲ್ಲದೆ ಕನಿಕರವೂ ಉಂಟಾಯಿತು. "ಆಗಲಿ. ಇನ್ನು ಎರಡು ತಿಂಗಳಿಗೆ ಒಂದು ಇನ್‌ಕ್ರಿಮೆಂಟ್ (ಸಂಬಳದ ಬಡತಿ) ಬರುತ್ತೆ, ಆಗ ಬಾ, ನೋಡೋಣ" ಎಂದು ನನ್ನ ಬಾಲ್ಯ ಸ್ನೇಹಿತನನ್ನು ಬೀಳ್ಕೊಂಡೆ. ಅವನು – "ಮರೆಯಬೇಡ ರಾಮು, ನೆನಪಿರಲಿ" – ಎಂದು ತನ್ನ ವಿಸಿಟಿಂಗ್ ಕಾರ್ಡ್ (ಭೇಟಿಯ ಹೆಸರುಚೀಟಿ) ಒಂದನ್ನು ಕೈಗೆ ಕೊಟ್ಟ. ಅದನ್ನು ನೋಡಿ, ನನಗೆ ಆಶ್ಚರ್ಯದ ನಗೆ ತೆರೆತೆರೆಯಾಗಿ ಉಕ್ಕಿತು. ನನ್ನ ನಗು ನಿಂತಮೇಲೆ, "ಯಾಕೋ, ಹಾಗೆ ನಕ್ಕೆ? ನನ್ನ ವೇಷ ಅಷ್ಟು ಅಸಹ್ಯವಾಗಿದೆಯೇನೋ?" ಎಂದು ಕೇಳಿದ. "ವೇಷ ಅಲ್ಲ, ನಿನ್ನ ಹೆಸರು" – ಎಂದೆ ನಾನು. "ಯಾಕೆ ಅಷ್ಟು ವಿಕಾರವಾಗಿದೆಯೇ, ವಿಘ್ನೇಶ ಎನ್ನುವುದು?" – "ವಿಕಾರವಲ್ಲವೋ ಮಹಾರಾಯ. ಸೂರಿ – ಸೂರ್ಯನಾರಾಯಣ – ವಿಘ್ನೇಶ ಯಾವಾಗ ಆದ ಅಂತ?" – "ಸೂರ್ಯನಾರಾಯಣನಿಗೆ ಗ್ರಹಣ ಹಿಡಿದಾಗ, ಅದೊಂದು ಕಥೆ, ಇನ್ನೊಂದು ಸಲ ಹೇಳುತ್ತೇನೆ. . ಮಿಸ್ಟರ್—ರಾಯರನ್ನು ನೋಡಬೇಕು, ಹೊತ್ತಾಯಿತು. ಅಂತೂ ನೆನಪಿರಲಪ್ಪ" ಎಂದು ಮುರುಕಲು ಸೈಕಲ್ ಹತ್ತಿ ಕಟಕಟ ಸದ್ದುಮಾಡುತ್ತ ಹೊರಟುಬಿಟ್ಟ.

ಇನ್ನೊಂದು ಸಲ ಬಂದಾಗಲೂ ಅವನು ನನ್ನ ನಕಾರವನ್ನು ನುಂಗಿ ಕೊಳ್ಳಬೇಕಾಯಿತು.

"ನೋಡು, ಸೂರಿ – ಅಲ್ಲ ವಿಘ್ನೇಶ್...."

"ನಿನಗೆ ಸೂರಿಯೇ ಕಣೋ. ಇನ್‌ಷ್ಯೂರೆನ್ಸ್ ವರ್ಲ್ಡ್‌ಗೆ (ಪ್ರಪಂಚಕ್ಕೆ) ಮಾತ್ರ...."

"ಸರಿ, ಸೂರಿ. ಇನ್‌ಕ್ರಿಮೆಂಟೂ ಬಂತು. ದೇವರು ಸಂಸಾರಕ್ಕೊ ಒಂದು ಇನ್‌ಕ್ರಿಮೆಂಟ್ ದಯಪಾಲಿಸಿದ್ದಾನೆ...."

" ಆಲ್‌ರೈಟ್ ! ಹೆಣ್ಣೋ ಗಂಡೋ ?"

" ಕೇಳ್ತೀಯಲ್ಲ...."

" ಸರಿ, ಹಾಗಿದ್ದ ಮೇಲೆ ಒಂದು ಮ್ಯಾರೇಜ್ ( ಮದುವೆ ) ಪಾಲಿಸಿಯೇ ತೆಗೆದುಬಿಡು, ಮಗಳ ಹೆಸರಿನಲ್ಲಿ...."

" ಒಳ್ಳೆಯದೇ, ಆದರೆ....ಇರಲಿ, ನೋಡೋಣ...." ಎಂದು ನಾನು ರಾಗ ಎಳೆದೆ.

" ನಿನಗೆ ಇಷ್ಟವಿಲ್ಲದಿದ್ದರೆ ಹೇಳಿಬಿಡು. ನಿನ್ನನ್ನು ಬಲವಂತಪಡಿಸು ವುದಿಲ್ಲ. ಬಂದಾಗಲೆಲ್ಲ ಆಗ ಬಾ ಈಗ ಬಾ ಅನ್ನಬೇಡ. ದಾಕ್ಷಿಣ್ಯ ಇಟ್ಟು ಕೊಳ್ಳದೆ ಖಂಡಿತವಾಗಿ ಹೇಳಿಬಿಡು. ಇನ್ನು ಈ ವಿಷಯ ಪ್ರಸ್ತಾಪವೇ ಮಾಡು ವುದಿಲ್ಲ, ನಿನ್ನ ಕೂಡ."

ಅವನ ಧ್ವನಿಯಲ್ಲಿ ಅಸಮಾಧಾನವೇನೂ ಇರಲಿಲ್ಲ. ಖಂಡಿತವಾದ ನುಡಿತವೇನೋ ಹೌದು. ಅನುನಯ, ಮುಖ ಮಂಡಲದ ಮೇಲೆ ಸದಾ ಮಂದಹಾಸದ ಪ್ರದರ್ಶನ, ಬಳಸು ಮಾತು, ಪರಿಚಯವಿಲ್ಲದಿದ್ದರೂ ಸಂಸಾರದ ಕಷ್ಟಸುಖಗಳಲ್ಲಿ ಸಹಾನುಭೂತಿ, ಬೇಸರ ತೋರದ ಭೇಟಿಗಳ ಪರಂಪರೆ, ವಿಮಾ ಮಹಿಮೆಯ ಪ್ರಕೀರ್ತನೆ – ಈ ಯಾವ ಅವಶ್ಯ ಲಕ್ಷಣಗಳ ಸುಳಿವೂ ಇಲ್ಲದ ಸೂರಿ ವಿಚಿತ್ರ ವಿಮಾ ಪ್ರತಿನಿಧಿಯಾಗಿ ಕಂಡ. ವೃತ್ತಿಗೂ ಇನ್ನೂ ಹೊಸಬ ಎಂದುಕೊಂಡೆ. ಈ ಎಲ್ಲ ಕಾರಣಗಳಿಂದ ಅವನಲ್ಲಿ ಮೂಡಿದ್ದ ನನ್ನ ಕನಿಕರ ಇಮ್ಮಡಿಯಾಯಿತು. ಆದ್ದರಿಂದ, ಅವನ ಮನಸ್ಸನ್ನು ನೋಯಿಸಲು ಇಷ್ಟಪಡದೆ, " ಇನ್ನೊಂದು ಎರಡು ತಿಂಗಳು ಬಿಟ್ಟುಕೊಂಡು ಬಾ, ನೋಡೋಣ " ಎಂದೆ. " ಆಲ್‌ರೈಟ್ " ಎನ್ನುತ್ತ ಸುಪ್ರಸನ್ನನಾಗಿಯೇ ಹೊರಟುಹೋದ.

ವೃತ್ತಿಗೆ ಹಳಬನಾಗಲಿ ಹೊಸಬನಾಗಲಿ, ಮಾತು ಮಾಡಿಕೊಂಡಂತೆ ಯಾವ ವಿಮಾ ಪ್ರತಿನಿಧಿಯೂ ಭೇಟಿ ಕೊಡದೆ ಇರುವುದಿಲ್ಲ. ವಿಘ್ನೇಶ್ ತಪ್ಪದೆ ಮತ್ತೆ ಬಂದ.

ಬಂದವನೇ, ನಾನು ಎತ್ತಿಕೊಂಡಿದ್ದ ಮಗುವಿನ ಕೈಗೆ ಒಂದು ಬೆಳ್ಳಿಯ ರೂಪಾಯಿ ಕೊಟ್ಟ ; ' ತಾರಮ್ಮಯ್ಯ ತಾತಾ ಗುಬ್ಬಿ ' ಎಂದು ಏನೇನೋ ಆಡಿಸಲು ಪ್ರಯತ್ನಪಟ್ಟ ; ಮಗುವಿನ ಹೆಸರು ಕೇಳಿ ತಿಳಿದುಕೊಂಡ : ಅದನ್ನು

ತಾನು ಎತ್ತಿಕೊಳ್ಳಲು ಪ್ರಯತ್ನಿಸಿ ಅಳಿಸಿದ. ಪರವಾಯಿಲ್ಲ, ವೃತ್ತಿಗೌರವದ ಘನತೆಯನ್ನು ಎತ್ತಿಹಿಡಿಯಲು ಕಲಿಯುತ್ತಿದ್ದಾನೆ, ವಿಘ್ನೇಶ್ – ಎಂದು ನನಗೆ ಸಂತೋಷವಾಯಿತು. ಇವನನ್ನು ನಿರಾಶೆಗೊಳಿಸಬೇಕಲ್ಲ ಎಂದು ಖೇದವೂ ಆಯಿತು.

ಖೇದಕ್ಕೆ ಕಾರಣ ಇಷ್ಟೆ: ಕಳೆದ ತಿಂಗಳು ತಾನೆ ನನ್ನ ಇನ್ನೊಬ್ಬ ಆಪ್ತ ಮಿತ್ರ – ಸೂಟ್ ಹ್ಯಾಟ್ ಧರಿಸಿ ಕಾರಿನಲ್ಲಿ ತಿರುಗುವ ವಿಮಾ ಪ್ರಪಂಚದ ಹಳೆಯ ಹುಲಿ – ಬಂದು, ನನ್ನಿಂದ ನನ್ನ ಹೆಣ್ಣುಮಗುವಿನ ಹೆಸರಿನಲ್ಲಿ ಮೂರು ಸಾವಿರಕ್ಕೆ ಒಂದು 'ಮ್ಯಾರೆಜ್ ಪಾಲಿಸಿ' ಗಿಟ್ಟಿಸಿಯೇ ಬಿಟ್ಟ. ಅವನ ಮಾತು ಗಾರಿಕೆಗೆ ಮರುಳಾಗಿ ನಾನು ಹಾಗೆ ಮಾಡಲಿಲ್ಲ; ಅವನ ಉಡುಪೂ ನನ್ನನ್ನು ಮೋಸಗೊಳಿಸಲಿಲ್ಲ; ವಿಘ್ನೇಶನಂತೆ ಅವನು ನನ್ನ ಮಗುವಿನ ಕೈಗೆ ರೂಪಾಯನ್ನೂ ಕೊಡಲಿಲ್ಲ; ನನ್ನ ಇಂದಿನ ಉದ್ಯೋಗ ದೊರಕಲು ಅವನ ಶಿಫಾರಸೂ ಕೆಲಮಟ್ಟಿಗೆ ಕಾರಣವಾಗಿತ್ತು. ಅವನಿಗೆ ನಾನು ಹೇಗೆ ಕೃತಘ್ನನಾಗಿ ನಡೆದು ಕೊಳ್ಳಲಿ? ವಿಘ್ನೇಶನ ದುರದೃಷ್ಟ ಎಂದು ಮನಸ್ಸಿನಲ್ಲಿ ಬಹು ಪೇಚಾಡಿದೆ. ಆದ್ದರಿಂದಲೇ ಇವನನ್ನು ನಿರಾಶೆಗೊಳಿಸಬೇಕಲ್ಲ ಎಂದು ನನಗೆ ವ್ಯಥೆಯಾದದ್ದು.

ಕಂತು ಕಟ್ಟುವುದು ಕಷ್ಟ; ಆದರೂ ಚಿಂತೆಯಿಲ್ಲ, ಮಿತ್ರನ ಮನಸ್ಸು ನೋಯಿಸಬಾರದು ಎಂದು ಆಲೋಚಿಸಿ ಎರಡು ಸಾವಿರಕ್ಕೆ ಇವನ ಬಳಿ ಇನ್ನೊಂದು ಪಾಲಿಸಿ ಏಕೆ ತೆಗೆಯಬಾರದು ಎಂದು ಅವನ ಪೂರ್ವಭಾವಿ ಮಾತು ಗಳನ್ನು ಕೇಳಿಯೂ ಕೇಳಿದವನಂತೆ ಏನೋ ಅರ್ಧಜ್ಞಾನವಾಗಿರಲು, ಅವನು ಇದ್ದಕ್ಕಿದ್ದ ಹಾಗೆ ಜೇಬಿನಿಂದ ಕೆಲವು ಮಡಿಚಿದ ಚೀಟಿಗಳನ್ನು ನನ್ನ ಮುಂದೆ ಹಾಕಿ –

"ರಾಮು, ಈ ಮಾನ ಮೋಷದಿಂದ ಪ್ರಯೋಜನವಿಲ್ಲ. ಯಾವುದಾದರೂ ಒಂದು ಚೀಟಿ ಎತ್ತು" ಎಂದು ಗುಡುಗಿದ.

ನಾನು ಗಾಬರಿಯಾಗಿ – "ಇದು ಏನೋ ?!?" ಎಂದೆ.

"ಇದೇ – ಅನಾದಿಯಿಂದ ಬಂದಿರುವ ಸಭ್ಯ ಸಂಪ್ರದಾಯ. ಸಮ ಸಮ ವೋಟು ಬಂದಾಗ ಸಭೆಯ ಯಜಮಾನರು ತಮ್ಮ ಕ್ಯಾಸ್ಟಿಂಗ್ ವೋಟ್ ಚಲಾಯಿಸಿ ಒಂದು ಪಕ್ಷದ ಆಗ್ರಹಕ್ಕೆ ಬಲಿಯಾಗಲು ಇಷ್ಟಪಡದೆ ಅನುಸರಿಸುವ ಉಪಾಯ. ಕ್ರಿಕೆಟ್ ಮ್ಯಾಚ್‌ಗಳಲ್ಲಿ ಯಾರು ಮೊದಲಾಡಬೇಕೆಂದು ಟಾಸ್

ಹಾಕುವುದಿಲ್ಲವೆ? ಇದೇ ಆ Sportive (ಕ್ರೀಡಾಭಾವನೆಯ) ಮಾರ್ಗ. ಒಟ್ಟು ಜೀವನಕ್ಕೆಲ್ಲಾ ಈ ಮಾರ್ಗ ಅನುಸರಿಸಬೇಕೆಂದು ನನ್ನ ಸಿದ್ಧಾಂತ. ಕೋರಿಯಾ ಸಮಸ್ಯೆಯಿಂದ ಕಾಶ್ಮೀರ ಸಮಸ್ಯೆಯ ವರೆಗೆ ಎಲ್ಲ ಸಮಸ್ಯೆಗಳನ್ನೂ ಹೀಗೆ ಪರಿಹರಿಸಬಹುದೆಂದು ನಾನು ಹೇಳುತ್ತೇನೆ. ಆದರೆ ನನ್ನ ಮಾತು ಕೇಳುವವರಾರು? ನನ್ನ ಮಟ್ಟಿಗೆ ನಾನು ಅನುಸರಿಸುತ್ತೇನೆ. ನುಡಿದಂತೆ ನಡೆಯಬೇಕೋ ಬೇಡವೋ?.... ನಿನಗೆ ಇಷ್ಟವಿಲ್ಲದಿದ್ದರೆ ಹೇಳು, ನಾನೇ ಒಂದನ್ನು ಎತ್ತಿ ಕೊಡುತ್ತೇನೆ...." ಎಂದು ನಿರ್ಧರವಾಗಿ ನುಡಿದ.

"ಅಲ್ಲವೋ, ನಮ್ಮ ಮನಸ್ಸಿನಲ್ಲಿರುವುದಕ್ಕೆ ವಿರುದ್ಧವಾಗಿ ಚೀಟಿ ಬಂದರೆ?"

"ಅದರಂತೆ ನಡೆಯಬೇಕು. ಅದೇ ಧೀರಮಾರ್ಗ. ಅದೇ ಪೌರುಷ. ಮುಖ್ಯ ಮುಖ್ಯ ವಿಚಾರಗಳಲ್ಲಿ ಮನಸ್ಸನ್ನು ನಂಬಲೇ ಬಾರದು. ಮನಸ್ಸೊಪ್ಪಿದ ಹೆಣ್ಣನ್ನು ಮದುವೆಯಾಗಿ ಎಷ್ಟು ಜನ ಮಣ್ಣು ಮುಕ್ಕಿಲ್ಲ? ನಿಜವಾಗಿ, ನಾವು ಮನಸ್ಸಿನಲ್ಲಿ ಮಾಡುವ ನಿರ್ಣಯಗಳೆಲ್ಲಾ ಚೀಟಿ ಎತ್ತುವುದೇ! ನಾವು ಮಾಡುವ ತೀರ್ಮಾನಗಳ ಪೂರ್ವಾಪರಗಳೆಲ್ಲ ಸಂಪೂರ್ಣವಾಗಿ ಯಾರಿಗೆ ತಾನೇ ಗೊತ್ತಿರುತ್ತದೆ? ಕಣ್ಣು ಬಿಟ್ಟುಕೊಂಡೇ ಹಳ್ಳಕ್ಕೆ ಬೀಳುತ್ತೇವೆ. ಮರ್ಯಾದೆ ಕಾಪಾಡಿಕೊಳ್ಳುವುದಕ್ಕೆ ಬೀಳಲಿಲ್ಲ ಎನ್ನುತ್ತೇವೆ, ಒಳಗೆ ಯಮಯಾತನೆ. ಸ್ವಲ್ಪ ಅಭ್ಯಾಸವಾದರೆ, ನನ್ನದು ರಾಜಮಾರ್ಗ."

"ಅದು ಸರಿಯೇ, ಆದರೂ...." ಎಂದು ನಾನು ರಾಗ ಎಳೆದೆ.

"ನೋಡು, ರಾಮು. ಈ ಮಾರ್ಗ ನಾನು ಅನುಸರಿಸಿದ ಕೆಲವು ಮುಖ್ಯ ಸಂದರ್ಭಗಳನ್ನು ಹೇಳುತ್ತೇನೆ. ನಿನಗೆ ಮರೆತುಹೋಗಿರಬಹುದು. ನಾವಿಬ್ಬರೂ ಇಂಟರ್‌ಮೀಡಿಯೆಟ್ ಪರೀಕ್ಷೆಗೆ ಕಟ್ಟಿದಾಗ, ಚೀಟಿ ಎತ್ತಿ ಬರಬಹುದಾದ ಪ್ರಶ್ನೆಗಳನ್ನು ಊಹಿಸೋಣ ಎಂದೆ. ನೀನು ಬೇಡ ಎಂದೆ. ನಿನ್ನ ಬುದ್ಧಿ ಉಪಯೋಗಿಸಿ ನೀನು ಪ್ರಶ್ನೆಗಳನ್ನು ಊಹಿಸಿ ನನಗೆ ಹೇಳಿದೆ. ನಿನ್ನ ನೋಟ್ಸನ್ನೆಲ್ಲಾ ಕೊಟ್ಟು, ನಿನ್ನ ಬುದ್ಧಿಯನ್ನೆಲ್ಲಾ ನನಗೆ ಧಾರೆಯೆರೆದೆ. ನೀನು ಊಹಿಸಿದ ಪ್ರಶ್ನೆಗಳು ಬರಲೇ ಇಲ್ಲ. ನೀನು ಬುದ್ಧಿವಂತ, ಪ್ಯಾಸು ಮಾಡಿಯೇ ಬಿಟ್ಟೆ. ನಿನ್ನ ಬಾಲ ಹಿಡಿದ ನಾನು ಡುಮ್ಕಿ ಹೊಡೆದೆ. ಮುಂದೆ ನೀನು ಬೆಂಗಳೂರು, ನಾನು ಮೈಸೂರು...."

" ಹೌದು, ಹೌದು " ಎಂದೆ, ನಾನು.

" ಮುಂದಿನ ವರ್ಷ ನನ್ನ ಕ್ರಮ ನಾನು ಅನುಸರಿಸಿದೆ. ಒಂದು ಪಾರ್ಟ್ ಪ್ಯಾಸಾಯಿತು. ಬರುವ ವರ್ಷ ಪೂರ್ತಿ ಪ್ಯಾಸಾಯಿತು. ಇನ್ನು ನನ್ನ ಮದುವೆಯ ಕತೆ ಕೇಳು...."

ಅವನು ನನಗೆ ಹೇಳಿದ ತನ್ನ ಮದುವೆಯ ಕಥೆಯ ಸಾರಾಂಶ ಇಷ್ಟು:

ನಾನು ಬಲ್ಲಂತೆ ಅವನ ತಂದೆ ಬಡ ಗುಮಾಸ್ತರು. ಹಿರಿಯ ಮಗನನ್ನು ಬಿ. ಎ. ಮುಟ್ಟಿಸಿದರೆ, ಅವನು ಸಂಸಾರಕ್ಕೆ ಆಧಾರವಾಗಿ, ತಮ್ಮ ಹೊರೆ ಇಳಿಯುತ್ತದೆಯೆಂದು ಅವರ ಎಣಿಕೆ. ಆದರೆ, ಸೂರಿ ಯಾವಾಗಲೂ ಓದಿನಲ್ಲಿ ಅಷ್ಟಷ್ಟೆ. ಪರೀಕ್ಷೆಗಳ ಬೇಲಿಗಳನ್ನು ಹಾರಿ ಇಂಟರ್ ಮುಟ್ಟುವ ವೇಳೆಗೆ ಅವನಿಗೆ ಇಪ್ಪತ್ತು. ಅವನಿಗೆ ಓದು ಸಾಕೆನ್ನಿಸಿತು. ತಂದೆಗೇನೋ ಮುಂದಕ್ಕೆ ಓದಿಸಬೇಕೆಂದು ಆಸೆ; ಆದರೆ ಚೈತನ್ಯವಿಲ್ಲ. ಸೂರಿಯ ಸೋದರಮಾವನಿಗೆ ಒಬ್ಬಳೆ ಮಗಳು; ಅವರಿಗೆ ಹಳ್ಳಿಯ ಕಡೆ ತಕ್ಕಮಟ್ಟಿಗೆ ಆಸ್ತಿಯೂ ಇತ್ತು. ಸೂರಿಯನ್ನು ಮುಂದಕ್ಕೆ ಓದಿಸಲು ಸಿದ್ಧವಾಗಿಯೂ ಇದ್ದರು. ಸೋದರ ಮಾವನ ಮಗಳೆಂದು ಸಿಡುಬಿನ ಕಲೆಯಿಂದ ವಿಕಾರಗೊಂಡ ಮುಖವನ್ನು ಮೆಚ್ಚುವುದು ಹೇಗೆ? ಸೂರಿ ಹಾಗಿರಲಿ, ಆ ಹೆಣ್ಣನ್ನು ತಂದುಕೊಂಡು ಅವನ ದಾಂಪತ್ಯ ಜೀವನವನ್ನು ಕಹಿಮಾಡಲು ತಂದೆ ತಾಯಿಗಳಿಗೇ ಇಷ್ಟವಿರಲಿಲ್ಲ. ಸೂರಿಯ ತಾಯಿ ತನ್ನ ತಮ್ಮನ ಹಲವಾರು ಬೇಡಿಕೆಗಳನ್ನು ನಿರಾಕರಿಸಿ ಅವನೊಂದಿಗೆ ನಿಷ್ಠುರ ಕಟ್ಟಿಕೊಳ್ಳಬೇಕಾಯಿತು. ಈ ಮಧ್ಯೆ, ಸೂರಿಗೆ ಅನೇಕರು ಹೆಣ್ಣು ಕೊಡಲೇನೋ ಬಂದಿದ್ದರು. (ಅವನು ರೂಪವಂತನೆ.) ಆದರೆ ಯಾರೂ ಈ ಕುಂಟೆತ್ತನ್ನು ಮುಂದಕ್ಕೆ ಓಡಿಸಲು (ಎಂದರೆ, ಓದಿಸಲು) ಸಿದ್ಧರಾಗಿರಲಿಲ್ಲ. ಅನುಕೂಲಸ್ಥ ಮಾವನ ನಿರೀಕ್ಷಣೆಯಲ್ಲೆ ಕಾಲ ಕಳೆಯುತ್ತ ಬಂತು. ಯಾರ ಹಂಗೂ ಬೇಡ, ಕೆಲಸ ಮಾಡಿ ಸಂಪಾದಿಸಿ ಓದುತ್ತೇನೆಂದು ಸೂರಿ ಬದಲಿ ಕೆಲಸಗಳಿಗೆ ಸೇರಿದ. ಸಂಪಾದನೆ ಸಂಸಾರಕ್ಕೆ ಸರಿಹೋಗುತ್ತಿತ್ತು. ಕೆಲಸದಲ್ಲಿರುವವನಿಗೆ ಮುಂದಕ್ಕೆ ಓದಿಸಲು ಸಹಾಯ ಮಾಡಿ ಹೆಣ್ಣು ಕೊಡಲು ಬರುವ ಅನುಕೂಲಸ್ಥರು ಯಾರು? ಅಂಥವರು ಸರಿಯಾದ ವರನನ್ನೇ ಹುಡುಕಿ ಕೊಂಡು ಹೋಗುತ್ತಾರೆ. ಕಡೆಗೆ ಒಬ್ಬರು ಅಡ್ವೋಕೇಟರು ಸೂರಿಗೆ ಸಹಾಯ ವನ್ನು ನೀಡಿ ತಮ್ಮ ರೂಪವತಿಯಾದ ಹೆಣ್ಣು ಮಗಳನ್ನು ಕೊಡಲು ಮುಂದೆ

ಬಂದರು. ಜೊತೆಗೆ, ಕನ್ಯೆ ವಿದ್ಯಾವತಿ ಬೇರೆ; ಎಸ್. ಎಸ್. ಎಲ್. ಸಿ. ವರೆಗೆ ಓದಿದ್ದಳು. ಬೀಗರ ಸ್ಥಾನಮಾನ, ಸಹಾಯದ ಭರವಸೆ – ಇವನ್ನು ಕಂಡು ಸೂರಿಯ ತಂದೆ ತಾಯಿ ಬಾಯ ಬಾಯಿ ಬಿಟ್ಟರು; ತನ್ನ ಮುಂದಿನ ಮಡದಿಯ ಮೋಹಕ ರೂಪಕ್ಕೆ ಸೂರಿ ಮರುಳಾದ. ಜಾತಕಗಳೂ ಕೂಡಿ ಬಂದುವು. ಈ ಪರಿಸ್ಥಿತಿಯಲ್ಲಿ ಕನ್ಯೆ ಇಪ್ಪತ್ತರ ಹತ್ತಿರ ಹತ್ತಿರದ ಬೆಳೆದ ಕನ್ಯೆ ಎಂಬ ಪ್ರತ್ಯಕ್ಷಗೋಚರವಾದ ಸತ್ಯಸಂಗತಿ (ಜಾತಕದ ಮೇರೆ ಹದಿನೆಂಟನೆಯ ದಂತೆ) ಒಂದು ದೋಷವೆಂದು ಯಾರೂ ಭಾವಿಸಲಿಲ್ಲ. ಲಗ್ನಪತ್ರಿಕೆಯೂ ಆಯಿತು. ಮದುವೆಗೆ ಒಂದೆರಡು ದಿನಕ್ಕೆ ಮುಂಚೆ ಸೂರಿಯ ತಾಯಿಯ ಕಿವಿಯಲ್ಲಿ ಯಾರೋ ಏನೋ ಸಂಶಯದ ಬೀಜವನ್ನು ಬಿತ್ತಿದರು. "ನೋಡಪ್ಪ, ವಿಷಯ ಹೀಗಿದೆಯಂತೆ. ನಿನ್ನ ಇಷ್ಟ, ನಿನ್ನ ಧೈರ್ಯ" ಎಂದು ನಿರ್ಣಯಾಧಿಕಾರವನ್ನು ತಾಯಿ ಮಗನಿಗೆ ವಹಿಸಿದರು. "ನಿನಗೆ ಹೇಗೆ ಕಂಡಿತು?" ಎಂದು ಸೂರಿ ಕೇಳಿದ. "ನನಗೇನೂ ಹಾಗೆ ಕಾಣಲಿಲ್ಲ. ಇಷ್ಟರ ಮೇಲೆ ಹೇಗಿದ್ದೀತೋ" ಎಂದು ತಾಯಿ ಹೇಳಿಬಿಟ್ಟರು. ಕನ್ಯೆಯ ರೂಪವೇನೋ ಸೂರಿಯ ಮನಸ್ಸನ್ನು ಕವರಿಬಿಟ್ಟಿತ್ತು. ತಂದೆಯೂ ವಿಷಯವನ್ನು ಇವನ ಇತ್ಯರ್ಥಕ್ಕೇ ಬಿಟ್ಟರು. ಸೂರಿ ಬಹು ಯೋಚನೆ ಮಾಡಿದ: ನಿರ್ಣಯ ಮಾಡಲಾಗಲಿಲ್ಲ. ಒಂದು ಕಡೆ ಕನ್ಯೆಯ ದಿವ್ಯರೂಪ; ಇನ್ನೊಂದು ಕಡೆ ಆ ಚೆಲುವಿನ ಬಿಂಬದ ಮೇಲೆ ಇಟ್ಟ ಕಳಂಕ ಚಿಹ್ನೆ. ಸೂರಿ ರಹಸ್ಯವಾಗಿ ಚೀಟಿ ಎತ್ತಿದ. "ಆಗಬಹುದು" ಎಂದಿತ್ತು. ಸೂರಿ ಬಯಸಿದ್ದೂ ಅದೆ. ಮದುವೆಯಾಯಿತು; ಒಂದೇ ದಿನದ ವಿಜೃಂಭಣೆಯ ಮದುವೆ. ಮದುವೆಯಾದ ಎಂಟು ದಿನಕ್ಕೆ ಮಂಡ್ಯದಿಂದ ಮಾವನವರ ಆದರದ ಆಹ್ವಾನವನ್ನು ಅಂಗೀಕರಿಸಿ, ಸೂರಿ ನೂತನ ಪತ್ನಿಯೊಂದಿಗೆ ಎರಡು ದಿನ ಸರಸಸಲ್ಲಾಪಗಳಲ್ಲಿ ಕಳೆದು, ಹಿಂದಿರುಗಿದ. ಅದಾದ ಎಂಟು ದಿನಕ್ಕೆ ನಿಷೇಕ ಪ್ರಸ್ತಕ್ಕೆ ಲಗ್ನ ಏರ್ಪಡಿಸಿರುವುದಾಗಿ ಮಾವನವರು ಕಾಗದ ಬರೆದರು. ಸೂರಿಯ ತಂದೆ ಸದ್ಯಕ್ಕೆ ಬೇಡ, ಮುಂದಿನ ವರ್ಷ ನೋಡೋಣ ಎಂದು ಉತ್ತರ ಕಳಿಸಿದರು. ಆದರೆ, ಅವರು ಮೇಲಿಂದ ಮೇಲೆ ಕಾಗದ ಹಾಕಲು ಮೊದಲು ಮಾಡಿದರು. ಮತ್ತೆ ಓದಲು ತೊಡಗಿದ್ದ ಸೂರಿ, ಬಿ.ಎ. ಪ್ಯಾಸಾಗುವವರೆಗೂ ಹೆಂಡತಿಯನ್ನು ಮನೆಗೆ ಕರೆಸಿಕೊಳ್ಳುವ ಯೋಜನೆ ಇಲ್ಲವೆಂದು ಖಂಡಿತವಾಗಿ ಹೇಳಿಬಿಟ್ಟ. ಅವನ ತಂದೆ ಹಾಗೆಯೇ

ಉತ್ತರ ಬರೆದರು. ಈ ನಡುವೆ ಸೂರಿಯ ತಂದೆಯೂ ರೋಗಗ್ರಸ್ತರಾಗಿ ಬದುಕಿದ್ದೇ ಹೆಚ್ಚಾಯಿತು. ಹೀಗೆ ಎರಡು ಮೂರು ತಿಂಗಳು ತಳ್ಳಿತು. ಒಂದು ದಿನ ಇದ್ದಕ್ಕಿದ್ದ ಹಾಗೆಯೇ ಮಗಳೊಂದಿಗೆ ಸೂರಿಯ ಮಾವನವರು ಬಂದಿಳಿದರು. ಇನ್ನೂ ಚೇತರಿಸಿಕೊಳ್ಳುತ್ತ ಹಾಸಿಗೆಯ ಮೇಲೆಯೇ ಮಲಗಿದ್ದ ಸೂರಿಯ ತಂದೆಯೊಡನೆ ಹೀಗೆ ಹೇಳಿದರು: "ನಿಮ್ಮ ಸೊಸೆ ಗರ್ಭಿಣಿ. ಇದನ್ನು ಸಕಾಲದಲ್ಲಿ ಸರಿಪಡಿಸೋಣ ಎಂತ ಅಷ್ಟು ಬಲವಂತಮಾಡಿದೆ. ನೀವು ಒಪ್ಪಲಿಲ್ಲ. ನಿಮ್ಮ ವಸ್ತುವನ್ನು ನಿಮ್ಮ ಮನೆಗೆ ಒಪ್ಪಿಸಿದ್ದೇನೆ" ಎಂದು ಅವರು ಮಗಳನ್ನು ಬಿಟ್ಟು ನಡೆದೇಬಿಟ್ಟರು. ಆಗ ಸೂರಿ ಮನೆಯಲ್ಲಿರಲಿಲ್ಲ. ಅವನು ಮನೆಗೆ ಬಂದಾಗ ತಂದೆ ಎಲ್ಲವನ್ನೂ ವಿವರಿಸಿ ಹೇಳಿದರು. ಗರ್ಭದಲ್ಲಿನ ಶಿಶು ತನ್ನದಲ್ಲವೆಂದು ಸೂರಿಗೆ ಗೊತ್ತು. ಹಾಗೆ ಹೇಳಿದರೆ ತಂದೆಯೂ ನಂಬದಿರಬಹುದು. ಮದುವೆಯಾದ ಕೂಡಲೆ ಮಾವನವರು ತನ್ನನ್ನು ಮಂಡ್ಯಕ್ಕೆ ಬರಮಾಡಿಕೊಂಡು, ಮಗಳೊಂದಿಗೆ ಸ್ವತಂತ್ರ ವಿಹಾರಕ್ಕೆ ಅವಕಾಶ ಕಲ್ಪಿಸಿಕೊಟ್ಟಿದ್ದರ ದುರುದ್ದೇಶ ಅವನಿಗೆ ಈಗ–ದಟ್ಟಗತ್ತಲೆಯಲ್ಲಿ ಟಾರ್ಚ್ ಲೈಟಿಗೆ ಗೋಚರವಾದ ಹೆಡೆಯೆತ್ತಿದ ನಾಗರ ಹಾವಿನಂತೆ–ಫಕ್ಕನೆ ಹೊಳೆಯಿತು. ಜಾರೆಯಾದವಳನ್ನು ಭಾರ್ಯೆಯೆಂದು ಸ್ವೀಕರಿಸುವುದೇ? ಮನಸ್ಸನ್ನು ಸೂರೆಗೊಂಡಿದ್ದ ಮನೋಹರೆಯನ್ನು ಮನೆಯಿಂದಾಚೆಗೆ ದೂಡುವುದೇ? ಸೂರಿಗೆ ಏನು ಮಾಡುವುದಕ್ಕೂ ತೋರಲಿಲ್ಲ. ಏನು ಮಾಡಬೇಕೆಂಬುದನ್ನು ಅವನ ತಂದೆ ತಾಯಿಗಳು ಅವನಿಗೇ ಬಿಟ್ಟರು. "ಏನಪ್ಪಾ ಇದು ಅಚಾತುರ್ಯ" ಎಂದು ತಂದೆ ಮಗನನ್ನು ಮೃದುವಾಗಿ ಟೀಕಿಸಿದರು. ತಾಯಿ ಮಗನಂತೆ ದಿಕ್ಕು ತೋರದವರಾಗಿದ್ದರು. ಲಾಯರ್‌ಬುದ್ಧಿಯ ಅಡಕೆಗತ್ತರಿಗೆ ತಾನು ಸಿಲುಕಿರುವುದು ಸೂರಿಗೆ ಚೆನ್ನಾಗಿ ಮನದಟ್ಟಾಯಿತು. ಬೇರೆಯ ದಾರಿ ಕಾಣದೆ–ಸೂರಿ ದೈವದ ಮರೆಹೊಕ್ಕ. ಅವನ ಭಾಗದ ದೈವ—ಚೀಟಿ. ಫಲಿತಾಂಶ—ಗುಟ್ಟು ರಟ್ಟು ಮಾಡದೆ, ತನ್ನವಳಲ್ಲದವಳನ್ನು ತನ್ನವಳನ್ನಾಗಿ ಮಾಡಿಕೊಂಡು ಮರ್ಯಾದೆ ಕಾಪಾಡಿಕೊಳ್ಳುವುದು. ತಂದೆಯ ಬಲವಂತಕ್ಕೆ ಪ್ರಸ್ತದ ಶಾಸ್ತ್ರವೂ ಆಯಿತು. ಸೂರಿಯ ದಾಂಪತ್ಯ ಸುಖವು, ಭಿಕ್ಷುಕ ಎಂಜಲೆಲೆಯ ಲಡ್ಡುವಿಗೆ ಕೈಯೊಡ್ಡಿದಂತಾಯಿತು. ತನ್ನ ನೋವು ನಿರಾಶೆಗಳನ್ನೆಲ್ಲಾ ಮೌನವಾಗಿ ನುಂಗಿಕೊಳ್ಳುತ್ತ ಬಂದ. ಪಾಪದ ಚುಚ್ಚುಮುಳ್ಳಿನ ವೇದನೆಯನ್ನು ಅನು

ಭವಿಸುತ್ತಿದ್ದ ತನ್ನ ಹೆಂಡತಿಯೂ ಸುಖಿಯಾಗಿರಲಿಲ್ಲವೆಂಬುದನ್ನು ಅವನು ಅರಿತು, ಅವಳಲ್ಲಿ ಕನಿಕರಗೊಂಡಿದ್ದ.

ಅಲ್ಲದೆ, ಅವಳ ರೂಪಿನ ಬೆಡಗೂ ಅವನನ್ನು ಸೆಳೆಯುತ್ತಿತ್ತು. ಅವನ ಹೃದಯದಲ್ಲಿ ದೊಡ್ಡ ಹೋರಾಟವೇ ನಡೆಯುತ್ತಿತ್ತು. ಬಹುಕಷ್ಟದಿಂದ ಅವನು ಮೂರು ನಾಲ್ಕು ತಿಂಗಳು ಕಳೆದ. ಆ ವೇಳೆಗೆ ಅವನ ಮಾವನವರು ಬಂದು ಮಗಳನ್ನು ಬಾಣಂತಿತನಕ್ಕೆಂದು ಕರೆದುಕೊಂಡು ಹೋದರು ಸೂರಿ ಮತ್ತೆ ಅವಳ ಮುಖವನ್ನು ನೋಡಲಿಲ್ಲ.

—ಕಚೇರಿಗೆ ಹೊತ್ತಾಗುವುದೆಂಬುದನ್ನೂ ಮರೆತು ನಾನು ಸೂರಿಯ ಕಥೆಯನ್ನು ಆಸಕ್ತಿಯಿಂದ ಕೇಳುತ್ತ ಕುಳಿತಿದ್ದೆ. ನನ್ನ ಆಕೆ ತಂದುಕೊಟ್ಟ ಕಾಫಿಯನ್ನು ಇಬ್ಬರೂ ಸೇವಿಸಿದ್ದಾಯಿತು. ನಡುವೆ ಬಾಯಿಹಾಕಿ, "ಮತ್ತೆ ಚೀಟಿ ಹಾಕಿ ಅವಳನ್ನು ಕರಸಿಕೊಳ್ಳಕೂಡದೆಂದು ತೀರ್ಮಾನಿಸಿಬಿಟ್ಟೆಯೋ?" ಎಂದು ನಾನು ತುಟಿವಿಾರಿ ಬಂದ ನಗೆಯೊಂದಿಗೆ ಪ್ರಶ್ನಿಸಿದೆ.

"ಇಲ್ಲ, ಹಾಗೆ ಮಾಡಲಿಲ್ಲ; ಮಾಡುತ್ತಲೂ ಇರಲಿಲ್ಲ. ಅವಳೇ 'ಚೀಟಿ ಮಗುಚಿ' ನನ್ನನ್ನು ಪಾರುಮಾಡಿದಳು".

"ಮಗು?"

"ಹುಟ್ಟುವಾಗಲೇ ಸತ್ತು ಹುಟ್ಟಿತ್ತು."

"ಹಾಗಾದರೆ....ಈಗ...."

"ಮತ್ತೆ ಮದುವೆಮಾಡಿಕೊಂಡೆ – ನನ್ನ ಸೋದರಮಾವನ ಮಗಳನ್ನು."

"ನಿನ್ನ ತಂದೆ ತಾಯಿಗೇ ಇಷ್ಟವಿರಲಿಲ್ಲ ಎಂದೆ? ಹೆಣ್ಣು ಬೇರೆ ತುಂಬ ಕುರೂಪ ಎಂದೆ?...."

"ಸುರೂಪದ ಹೆಣ್ಣೊಂದಿಗೆ ಸುಖಪಟ್ಟದ್ದಾಯಿತಲ್ಲ!"

"ಹಾಗಾದರೆ ಈ ಮದುವೆಗೆ ನೀನೇ ಮನಃಪೂರ್ವಕವಾಗಿ ಒಪ್ಪಿದೆಯೋ?"

"ಹೌದು. ನನ್ನ ಹೆಂಡತಿ ಸತ್ತು ವರ್ಷವಾದರೂ ನನ್ನ ಸೋದರಮಾವನ ಮಗಳಿಗೆ ಇನ್ನೂ ಮದುವೆಯಾಗಿರಲಿಲ್ಲ, ಪಾಪ. ನನ್ನ ಸೋದರಮಾವ ಮತ್ತೆ ನನ್ನ ತಾಯಿಯ ಕಾಲು ಕಟ್ಟಿಕೊಳ್ಳತೊಡಗಿದರು. ನನ್ನ ತಾಯಿ ಯಾವ ಜವಾಬುದಾರಿಯನ್ನೂ ಹೊರಲು ಇಷ್ಟಪಡದೆ ನನ್ನ ಕಡೆಗೆ ಕೈತೋರಿದರು.

"ನನ್ನ ಮೊದಲ ಹೆಂಡತಿಯೆನಿಸಿದ್ದವಳ ರೂಪು ನನ್ನಿಂದ ಇನ್ನೂ ಮರೆಯಾಗಿರಲಿಲ್ಲ. ನನ್ನ ಸೋದರಮಾವನ ಮಗಳನ್ನು ಮತ್ತೆ ನೋಡಿದಾಗ ಆ ನೆನಪು ಮತ್ತಷ್ಟು ಸ್ಫುಟವಾಯಿತು. ಆ ರೂಪಿನ ನೆನಪಿನ ಸವಿಯೊಂದಿಗೆ ಕಹಿಯ ನೆನಪೂ ಆಯಿತು. ಈ ಪ್ರಪಂಚದಲ್ಲಿ ಯಾವುದನ್ನು ತಾನೆ ಸಂಪೂರ್ಣ ತೃಪ್ತಿಯಿಂದ ಸ್ವೀಕರಿಸಬಹುದು? ಕೆಲವು – ಹಲಸಿನ ಹಣ್ಣು, ಮೊದಲೇ ಮುಳ್ಳು, ಅಂಟು; ಇನ್ನು ಕೆಲವು ಮಾವಿನ ಹಣ್ಣು – ಸ್ವಲ್ಪ ತಿಂದಾದ ಮೇಲೆ, ಒಳಗೆಲ್ಲ ಹುಳು. ಅನ್ನ ಮೆತ್ತಿದ್ದ ಮರಳಿನ ಉಂಡೆಯನ್ನು ತೆಗೆದುಕೊಂಡಾಯಿತು. ಈಗ ತಿಳಿದೂ ತಿಳಿದೂ ಅನ್ನ ಮೆತ್ತಿದ ಸೆಗಣಿಯ ಉಂಡೆಗೆ ಕೈಯೊಡ್ಡ ಬೇಕಾಗಿದೆಯಲ್ಲಾ – ಎಂದು ತುಂಬ ಪೇಚಾಡಿದೆ. ಈ ಹೆಣ್ಣಿನ ವಿಚಾರದಲ್ಲಿ ಮೆಚ್ಚಿಗೆಯ ಮಾತೇ ಇಲ್ಲ. ಆದರೆ, 'ಅಯ್ಯೋ ಪಾಪ' ಎನ್ನಿಸಿತು. ಕೆಲವು ವೇಳೆ ಮನಸ್ಸು ಹಾಗೂ ಹೀಗೂ ತೂಗಾಡುವುದಕ್ಕೆ ಮೊದಲಾದರೆ ಹುಚ್ಚು ಹಿಡಿದ ಹಾಗೆ ಆಗಿಹೋಗುತ್ತೆ...."

"ಈ ಸಲವೂ ಚೀಟಿ ಹಾಕಿಬಿಟ್ಟೆಯೋ?"

"ಹೌದು ಮತ್ತೆ, ಚೀಟಿ ಹಾಕಿದೆ. ಬಂದ ಫಲಿತಾಂಶವನ್ನು ದೇವರ ಪ್ರಸಾದ ಎಂದು ಒಪ್ಪಿದೆ. ಇವಳನ್ನು ಮದುವೆಯಾದೆ. ನನ್ನ ಸೋದರಮಾವ ಅವಳ ಹೆಸರಿಗೆ ಒಂದೆರಡು ಗದ್ದೆ ಹೊಲಗಳನ್ನು ಬರೆದುಕೊಟ್ಟಿದ್ದಾರೆ. ಈಗ ನನಗೆ ಯಾರ ಹಂಗೂ ಇಲ್ಲ. ನಾನು ಕೆಲಸಕ್ಕೆ ರಾಜಿನಾಮೆ ಕೊಟ್ಟಿದ್ದು ಹೇಗೆ ಅಂತ? ಡಿಸ್ಟ್ರಿಕ್ಟ್ ಆಫೀಸಿನಲ್ಲಿ ಒಂದು ಖಾಯಂ ಕೆಲಸವೇ ಸಿಕ್ಕಿತ್ತು. ಒಂದು ದಿನ ನನ್ನ ಮೇಲ್ಪಟ್ಟ ಶಿರಸ್ತೆದಾರರು ಕಾರಣವಿಲ್ಲದೆ ನನ್ನ ಮೇಲೆ ರೇಗಿದರು; ಮನೆಗೆ ಬಂದೆ; ಚೀಟಿ ಎತ್ತಿದೆ; ರಾಜೀನಾಮೆ ಸಲ್ಲಿಸಿದೆ. ನಾನು ಇನ್‌ಷ್ಯೂರೆನ್ಸ್ ಕಸಬು ಹಿಡಿದದ್ದೂ ಹೀಗೆಯೇ. ಇನ್‌ಷ್ಯೂರೆನ್ಸ್ ಏಜೆಂಟಾದ ಮೇಲೆ ನನ್ನ ಹೆಸರು ಬದಲಾಯಿಸಿಕೊಂಡದ್ದೂ ಹಾಗೇ. ಹತ್ತಾರು ಹೆಸರು ಬರೆದು ಹಾಕಿ, ಒಂದು ಚೀಟಿ ಎತ್ತಿ, ವಿಘ್ನೇಶ್ ಆದೆ. ನನ್ನ ಮಕ್ಕಳು – ಸುರೇಶ್, ಸುಧಾ – ಚೀಟಿಯ ಹೆಸರನ್ನೆ ಹೊತ್ತಿವೆ. ಚೀಟಿ ಎತ್ತಿಸಿ ಎಷ್ಟೋ ಪಾಲಿಸಿಗಳನ್ನು ಗಿಟ್ಟಿಸಿದ್ದೇನೆ. ಚೀಟಿ ಎತ್ತಿ ಬದಲಾಯಿಸಲಾಗದೆ ಇರುವುದು ಒಂದೇ – ನನ್ನ ಹೆಂಡತಿಯ ರೂಪು!" ಎಂದು ಗೊಳ್ಳನೆ ನಕ್ಕ.

" ಹಾಗಾದರೆ ನಿನ್ನ ಹೆಂಡತಿಯೊಂದಿಗೆ ಅದು ಹೇಗೆ ಸುಖವಾಗಿದ್ದೀಯೆ ?" ಎಂದು ನಾನು ಕುತೂಹಲದಿಂದ ಪ್ರಶ್ನಿಸಿದೆ.

" ಸುಖ ಎಂದರೆ ಏನು ? ಮನಸ್ಸಿನ ಪ್ರವೃತ್ತಿ. ' ಇವಳನ್ನು ಮದುವೆಯಾಗಿ ಸುಖವಾಗಿರು ' ಎಂದು ಚೀಟಿಯ ನಿರ್ಣಯದ ಆದೇಶ. ನನ್ನ ಮನಸ್ಸನ್ನು ಹಾಗೆಯೇ ತಿದ್ದಿಕೊಂಡಿದ್ದೇನೆ. ಸುಖವಾಗಿದ್ದೇನೆ. ಇಷ್ಟರ ಮೇಲೆ, ಅವಳ ಮುಖದಲ್ಲಿ ಕಾಣಬಾರದ ಸೌಂದರ್ಯ ಅವಳ ಚಿನ್ನದಂಥ ಗುಣದಲ್ಲಿ ನನಗೆ ಕಂಡುಬಂದಿದೆ. ಅದೂ ಅಲ್ಲದೆ...."

ಅವನು ಹೆಣ್ಣುತನದ ಬಗೆಗೆ ಕೊಟ್ಟ ಸ್ವಾರಸ್ಯವಾದ ಉಕ್ತಿಯನ್ನು ನಾನು ಇಲ್ಲಿ ಬಹಿರಂಗಪಡಿಸಲು ಇಷ್ಟಪಡುವುದಿಲ್ಲ. ತಿಳಿದವರಿಗೆ ತಿಳಿದೇ ಇದೆ.

ನನಗೂ ಹೊತ್ತಾಗುತ್ತ ಬಂತು, " ಸರಿ, ಹಾಗಿದ್ದರೆ ಒಂದು ಚೀಟಿ ಎತ್ತಿಬಿಡುತ್ತೇನೆ " ಎಂದು ಹೇಳಿ, ಎತ್ತಿ ಅವನ ಕೈಗೆ ಕೊಟ್ಟೆ. " ಬೇಡ " ಎಂದು ಬರೆದಿತ್ತು,

ನನಗೆ ನಗು ಬಂದಿತು. ನಗುವನ್ನು ತಡೆದುಕೊಂಡು, " ನಿನ್ನ ಚೀಟಿಗೆ ಬೆಂಕಿ ಹಾಕು. ಎರಡು ಸಾವಿರಕ್ಕೆ ಒಂದು ಪಾಲಿಸಿ ಕೊಡು " ಎಂದೆ.

" ಖಂಡಿತ ಒಲ್ಲೆ. ನನ್ನ ತತ್ತ್ವಕ್ಕೆ ನಾನೆ ವಿರುದ್ಧವಾಗಿ ನಡೆಯಲೇ ?" ಎಂದು ಎದ್ದ.

" ಹೋಗಲಿ, ಈಗ ಬೇಡ, ಮುಂದಿನ ವರ್ಷ ಬಾ. ಚೀಟಿ ಮಾತ್ರ ಹಾಕಬೇಡ. ಖಂಡಿತ ಒಂದು ಪಾಲಿಸಿ ತೆಗೆಯುತ್ತೇನೆ " ಎಂದೆ.

" ಆಲ್‌ರೈಟ್ " ಎಂದು ಬೀಳ್ಕೊಂಡು, ಸೈಕಲ್ ಹತ್ತಿ ಕಡಕಟ ಸದ್ದು ಮಾಡುತ್ತ ಹೊರಟ. ಚೀಟಿ ಎತ್ತಿ ಅವನು ಸದ್ಯದಲ್ಲಿಯೇ ಆ ಸೈಕಲ್ಲನ್ನು ಮಾರುವುದರಲ್ಲಿ ಸಂದೇಹವಿಲ್ಲ ಎಂದುಕೊಂಡೆ.

ಎಂಥೆಂಥ ವೀರ ಪೌರುಷವಾದಿಗಳು ಕೂಡ ತಮ್ಮ ಬಾಳನ್ನು, ತಮ್ಮ ಭವಿಷ್ಯವನ್ನು, ರೂಪಿಸಿಕೊಳ್ಳುವವರು ತಾವೆ ಎಂದು ಹೇಳಿಕೊಳ್ಳುತ್ತ ಅದೃಷ್ಟವಾದ ಯಾವುದೋ ನಿರ್ಣಾಯಕ ಶಕ್ತಿಯ ಕೈಚಳಕಕ್ಕೆ ಸಿಲುಕಿರುತ್ತಾರೆ – ಎಂಬ ವಿಶ್ಲೇಶನ ಸಿದ್ಧಾಂತದಲ್ಲಿ ನನಗೆ ಈಗೀಗ ನಂಬಿಕೆ ಬರುತ್ತಿದೆ. ಅವನು ಹೇಳುವಂತೆ ಇಂಥವರು ಆತ್ಮವಂಚಕರು. "ಎಲ್ಲ ಹಣೆಯ ಬರಹ, ದೇವರು ಮಾಡಿಸಿದಂತೆ ಆಗಲಿ"ಎಂದು ಏನೋ ಕುರುಡು ನಂಬಿಕೆಯಿಂದ ಮುನ್ನಡೆಯುತ್ತ,

ಕಾಣದ ದೈವವನ್ನು ಕತ್ತಲೆಯ ಗುಮ್ಮನಂತೆ ತಿಳಿದು, ಮೂಢಭಕ್ತಿ ವಶರಾಗಿ ಮುಂದೆ ಸಾಗುವವರು ಆತ್ಮವಿಶ್ವಾಸವಿಲ್ಲದ ಹೇಡಿಗಳು. ಕಾಣದ ದೈವವನ್ನು ಜುಟ್ಟು ಹಿಡಿದು ಎಳೆದು ತಂದು ಎದುರಿಗೆ ನಿಲ್ಲಿಸಿಕೊಂಡು, ಅದರ ಕೈಯ ದಾಳದ ಗರವನ್ನು ಮುಂದಾಗಿ ತಿಳಿದು, ಅದರಂತೆಯೇ ನಡೆಯ ಬೇಕೆನ್ನುವ, ನಡೆಯುವ, ಅದೃಷ್ಟಗ್ರಹಣಪಟುಗಳಾದ ವಿಘ್ನೇಶನಂಥವರು ನಿಜವಾದ ಪೌರುಷಶೀಲರೆಂದು ನನಗೆ ಅನ್ನಿಸತೊಡಗಿದೆ. ಆದರೆ, ಅವನ ಮೇಲ್ಪಂಕ್ತಿಯನ್ನು ಅನುಸರಿಸಲು ಮಾತ್ರ ನಾನು ಹಿಂತೆಗೆಯುತ್ತಿದ್ದೇನೆ. ಅನುಸರಿಸುವುದೇ ಬಿಡುವುದೇ ಎಂಬುದನ್ನು ನಿರ್ಣಯಿಸಬೇಕಾದರೂ ವಿಘ್ನೇಶನ ಕ್ರಮವನ್ನೇ ಅನುಸರಿಸಬೇಕೆಂದು ತೋರುತ್ತದೆ!

ವಿಘ್ನೇಶನಂಥ ವ್ಯಕ್ತಿಗಳೂ ಪ್ರಪಂಚದಲ್ಲಿ ಇರುವರೇ ಎಂದು ನಿಮಗೆ ಸಂದೇಹವಾಗಬಹುದು. 'ಚೀಟಿ ಎತ್ತಿ' ಸಂದೇಹ ನಿವಾರಣೆ ಮಾಡಿಕೊಳ್ಳಿ, ಬೇಕಾದರೆ!

# ಅಳು

ಅಳು, ಅಳು, ಅಳು !

ಮರಳಿ ಮರಳಿ ಅಳು ; ಇನ್ನೂ ಅಳು : ನಿಲುಗಡೆಯಿಲ್ಲದ ಅಳು !

ರೋಹಿಣಿಯು ಕೆನ್ನೆ ಅದೆಷ್ಟು ಕಂಬನಿಯನ್ನು ಕುಡಿದಿದೆಯೋ ? ಕಂಬನಿಯಲ್ಲಿ ತೊಯ್ದು ತೊಯ್ದು, 'ಅದಾವ ಬೆಂದ ದುಃಖದ ಕಡಲಿನಾಳದಿಂದ ಹನಿಹನಿಯಾಗಿ ಹೊರಬಂದು ನನ್ನ ಸಂಗ ಬೆಳಸುತ್ತಿರುವೆ ?' ಎಂದು ಅದೆಷ್ಟು ಸಲ ಆ ಕಂಬನಿಯು ಕೋಡಿಯನ್ನು ಪ್ರಶ್ನಿಸಿದೆಯೋ! ಕೆನ್ನೆ–ಕಂಬನಿಗಳ ಕೆಳಗೆ ಅವಳ ಸೆರಗಿನ ಕೊನೆ ಅದಿನ್ನೆಷ್ಟು ಸಲ ಭಂಗತಂದಿದೆಯೋ !

ರೋಹಿಣಿಯ ರೂಪಿಗೆ ಮನಸೋತು ಅವಳ ಕೈಹಿಡಿದ ರಮೇಶ್ ಹಸೆಮಣೆ ಮೆಟ್ಟಿದಂದಿನಿಂದ ಹೊಸ ಸಂಸಾರ ಹೂಡಿದ ಈ ವರೆಗೆ ಅವಳ ಕಂಬನಿಯ ಕಾರಣವರಿಯಲು ಅದೆಷ್ಟೋ ಸಲ ತುಂಬೊಲವಿನ ಒತ್ತಾಯದಿಂದ ಪ್ರಯತ್ನಿಸಿದ್ದ : ಪ್ರಯತ್ನಿಸಿ ಪ್ರಯತ್ನಿಸಿ ವಿಫಲನಾಗಿದ್ದ.

ಪ್ರಸ್ತವಾದಂದಿನಿಂದ ಇಂದಿನ ವರೆಗೆ ರಮೇಶ್ ರೋಹಿಣಿಯೊಂದಿಗೆ ಹಾಸಿಗೆಯನ್ನು ಹಂಚಿಕೊಂಡಿದ್ದ. ಆದರೇನು ? ಅವಳು ಅರಳಿಯ ಮರಕ್ಕೆ ಮದುವೆಯಾದ ಬೇವಿನ ಮರವಾಗಿದ್ದಳೆ ಹೊರತು, ಮಾಕಂದವನ್ನು ತಾನಾಗಿ ಅರಸಿ ಒಪ್ಪಿ ಅಪ್ಪಿದ ಮಲ್ಲಿಗೆಯಾಗಿರಲಿಲ್ಲ.

ಹಾಗೆಂದು ರೋಹಿಣಿಗೆ ರಮೇಶನಲ್ಲಿ ಒಲವಿಲ್ಲದೆ ಇರಲಿಲ್ಲ. ಆದರೆ ಅವಳ ನಿರಂತರ ಅಶ್ರುಧಾರೆಯಲ್ಲಿ ಒಲವಿನ ಒರತೆಯೂ ಸಂಗಮವಾಗಿದೆಯೆಂದು ಅವನು ಹೇಗೆ ತಾನೆ ಗುರುತಿಸಬೇಕು ? ಪಾಪ ! ಸಂಗಮಬೆಡೆಯನ್ನೆ ಅವನು ಕಾಣ. ಇನ್ನೊಂದು ಹೊಳೆಯ ಹರಿವಿನ ಅರಿವು ಅವನಿಗೆ ಹೇಗೆ ತಾನೆ ಆಗಬೇಕು ?

ಆದರೂ, ಅದೆಂತಹ ಮರುಕ ಅವನದು ! ರೂಪಮೋಹದಿಂದ ಹುಟ್ಟಿದ್ದೋ, ನಿಜವಾದದ್ದೋ ? ಅದನ್ನವನು ಕಾಣ.

ಮರುಕ ಮಾತ್ರವಲ್ಲ; ಅವಳಲ್ಲಿ ಅವನಿಗೆ ಒಲವೂ ಇದ್ದಿತು. ತನ್ನನ್ನೂ ಅಂತೆಯೆ ಅವಳು ಒಲಿದಿರುವಳೋ ಇಲ್ಲವೋ ? ಇದೇ ಅವನನ್ನು ಕಾಡುತ್ತಿದ್ದ ಸಂದೇಹ. ಮೆಯ್ಯನ್ನು ಕೊಡದಿದ್ದವಳು ಮನವನ್ನು ಹೇಗೆ ಕೊಟ್ಟಿದ್ದಾಳು ?

ಎಷ್ಟೋ ಸಲ ಅವಳನ್ನವನು ಪ್ರಶ್ನಿಸಿದ್ದ :

" ರೋಹಿಣೀ...."

"..............."

" ನನ್ನ ಮೇಲೆ ನಿನಗೆ ಪ್ರೀತಿ ಇಲ್ಲವೆ ?"

"..............."

" ನಿನ್ನ ಮನಸ್ಸಿನಲ್ಲಿ ಏನಿದೆ ಹೇಳು."

" ಇಷ್ಟವಿಲ್ಲದೆ ನನ್ನನ್ನು ಮದುವೆಯಾದೆಯಾ ?"

" ನಾನು ಬಡವನೆಂದು ದುಃಖವೆ ?...."

" ಇನ್ನು ಯಾರನ್ನಾದರೂ ಪ್ರೀತಿಸಿದ್ದೆಯಾ ?...." ಇತ್ಯಾದಿ, ಇತ್ಯಾದಿ.

ರಮೇಶನ ಪ್ರಶ್ನೆಗಳ ಗಾಳ ಅವಳ ಕಂಬನಿಯ ಹೊಳೆಯಿಂದ 'ನಿಜ'ದ ಮೀನನ್ನು ಹಿಡಿದು ತರಲು ತೀರ ಅಸಮರ್ಥವಾಗಿತ್ತು. ಅವನು ಪ್ರಯತ್ನಿಸುತ್ತಲೇ ಇದ್ದ: ಪ್ರಯತ್ನಿಸಿ ಪ್ರಯತ್ನಿಸಿ ವಿಫಲನಾಗಿದ್ದ.

ರೋಹಿಣಿ ಕಂಬನಿಯ ಕಡಲಿನಲ್ಲಿ ಮುಳುಗಿದ್ದರೆ ರಮೇಶ್ ನಿರಂತರ ನಿರರ್ಥಕ ಪ್ರಯತ್ನಶ್ರಾಂತನಾಗಿ ನಿರಾಶೆಯ ತಪ್ಪಲಿನಲ್ಲಿ ನಿಂತು, 'ನಿಜ'ದ ಪರ್ವತವನ್ನೇರಲಾಗದ ಹೆಳವನಾಗಿದ್ದ.

× × × ×

ರಮೇಶ್ ಬೆಂಗಳೂರಿನ ಕಚೇರಿಯೊಂದರ ಒಬ್ಬ ಬಡ ಗುಮಾಸ್ತೆ. ಅದಕ್ಕೆ ಮುಂಚೆ ಬಿ.ಎ. ಪರೀಕ್ಷೆಯಲ್ಲಿ ಪೂರ್ತಿ ತೇರ್ಗಡೆಯಾಗದೆ, ಮತ್ತೆ ಮತ್ತೆ ಓದಲು ಇಷ್ಟವಾಗಲಿ ಅನುಕೂಲವಾಗಲಿ ಇಲ್ಲದೆ, ತಾಯಿಯ ಬಲವಂತಕ್ಕೆ ಕಟ್ಟುಬಿದ್ದು ರೋಹಿಣಿಯನ್ನು ಮದುವೆಯಾಗಿ ಎರಡು ವರ್ಷವಾಗಿತ್ತು, ಅಷ್ಟೆ. ತಾಯಿಯ ಬಲವಂತದ ಜೊತೆಗೆ, ರಮೇಶನೂ ಹೆಣ್ಣನ್ನು ನೋಡಲು ಮೈಸೂರಿನಿಂದ ಬೆಂಗಳೂರಿಗೆ ಹೋಗಿದ್ದಾಗ ರೋಹಿಣಿಯನ್ನು ಮನಸಾರೆ ಮೆಚ್ಚಿ ಮದುವೆಯಾಗಿದ್ದ.

ರಮೇಶನ ತಾಯಿ ಕಮಲಮ್ಮ ಬೆಂಗಳೂರಿನಲ್ಲಿ ಗುಮಾಸ್ತೆಯಾಗಿದ್ದ ತಮ್ಮ ಹಿರಿಯ ಮಗನ ಮನೆಯಲ್ಲಿ ಇದ್ದರು. ಕಿರಿಯ ಮಗನ ಓದು, ಮಗಳ ಮದುವೆ—ಇವೆರಡರ ಹೊಣೆ ಅವರ ಕೊರಳಿಗೆ ಕಟ್ಟಿತ್ತು. ತಾನಂತೂ ಬಿ.ಎ. ಮಾಡಲಿಲ್ಲ, ತಮ್ಮನಾದರೂ ಮಾಡಲಿ ಎಂದು ವೆಂಕಟೇಶ್ ತಮ್ಮನನ್ನು ಮೈಸೂರಿನಲ್ಲಿ ಬಿ.ಎ. ಪರೀಕ್ಷೆಗೆ ಓದಿಸುತ್ತಿದ್ದ. ರಾಮಕೃಷ್ಣಯ್ಯನವರು ತಮ್ಮ ಮಗಳು ರೋಹಿಣಿಯನ್ನು ರಮೇಶನಿಗೆ ಕೊಡಬಂದಾಗ, ರಮೇಶ್ ಜೂನಿಯರ್ ಬಿ.ಎ. ತರಗತಿಯಲ್ಲಿ ಓದುತ್ತಿದ್ದ. ಇದ್ದಕ್ಕಿದ್ದಹಾಗೆ ಕಾಗದ ಬಂದಿತು ಅಣ್ಣನಿಂದ—ತಾಯಿ ಗೊತ್ತುಮಾಡಿರುವ ಹೆಣ್ಣನ್ನು ನೋಡಲು ಬರಬೇಕೆಂದು. ಹೌದು; ಕಮಲಮ್ಮ ಸಂಬಂಧವನ್ನು ಒಪ್ಪಿಬಿಟ್ಟಿದ್ದರು. ಹುಡುಗಿ ಚೆನ್ನಾಗಿದ್ದಾಳೆ; ಎಸ್.ಎಸ್.ಎಲ್.ಸಿ. ಮಾಡಿದ್ದಾಳೆ; ತಮ್ಮಂತೆ ಬಡವರೇ ಆದ ರಾಮಕೃಷ್ಣಯ್ಯನವರು ಹೊಟ್ಟೆಬಟ್ಟೆ ಕಟ್ಟಿಯೋ ಸಾಲಮಾಡಿಯೋ ವರೋಪಚಾರದ ಜೊತೆಗೆ ಐನೂರು ರೂಪಾಯಿ ಕೊಡಲು ಒಪ್ಪಿದ್ದಾರೆ. ಈ ಹಣ ಮಗಳ ಮದುವೆಗಾದೀತು. ಮಾತುಕತೆಯಿಂದ ಬೀಗರು ತುಂಬ ಗೌರವಸ್ಥರಾಗಿ ಕಾಣುತ್ತಾರೆ. ಇದಕ್ಕಿಂತ ಇನ್ನೇನಾಗಬೇಕು? ಕಷ್ಟದಲ್ಲಿರುವ ಅವರ 'ಕನ್ಯಾಸೆರೆ' ಬಿಡಿಸಿದರೆ ತಮಗೂ ಪುಣ್ಯಬರುತ್ತದೆ. ಇಷ್ಟೆಲ್ಲ ಆಲೋಚನೆ ಮಾಡಿ, ಕಮಲಮ್ಮ ಸಂಬಂಧವನ್ನು ತಾವು ಒಪ್ಪಿಬಿಟ್ಟಿದ್ದರು. ಆದರೂ ಹೆಣ್ಣನ್ನು ನೋಡಿ ಒಪ್ಪುವ ಸ್ವಾತಂತ್ರ್ಯವನ್ನು ಮಾತ್ರ ಕಾಲಕ್ಕೆ ತಕ್ಕಂತೆ ಮಗನಿಗೇ ಬಿಟ್ಟಿದ್ದರು.

ರಮೇಶ್ ಹೆಣ್ಣು ನೋಡಲು ಬೆಂಗಳೂರಿಗೆ ತನ್ನ ಅಣ್ಣನ ಮನೆಗೆ ಹೋದ. ರಾಮಕೃಷ್ಣಯ್ಯನವರು ತಮ್ಮ ಕುಟುಂಬದೊಂದಿಗೆ ಮಗಳು ರೋಹಿಣಿಯನ್ನು ತೋರಲು ಕರೆದುತಂದಿದ್ದರು. ಅವರು ಶ್ರಮವಹಿಸಿ ಅವಳಿಗೆ ಮಾಡಿದ್ದ ಅಲಂಕಾರ, ಮಲ್ಲಿಗೆ ಸಂಪಗೆ ಗುಲಾಬಿ ಪಚ್ಚೆಯತೆನೆಗಳ ಹೂಮಾಲೆಗೆ ಪನ್ನೀರು ಚಿಮುಕಿಸಿದಂತಿತ್ತು. ಇತರ ವಿವರಗಳನ್ನು ತನ್ನ ತಾಯ ತೀರ್ಮಾನಕ್ಕೆ ಬಿಟ್ಟು, ರಮೇಶ್ ರೋಹಿಣಿಯನ್ನು ಒಪ್ಪಿಕೊಂಡ.

ರೂಪೊಂದೇ ಅಲ್ಲ; ರೋಹಿಣಿ ಬಹು ಇಂಪಾಗಿ ಕೆಲವು ಹಾಡುಗಳನ್ನು ಹಾಡಿದಳು; ಒಂದೆರಡು ಚಲನಚಿತ್ರಗಳ ಹಾಡು, ಒಂದೆರಡು ದೇವರ ನಾಮ, ನಡುವೆ ಒಂದು ತ್ಯಾಗರಾಜರ ಕೃತಿ. "ಮಗಳಿಗೆ ಸಂಗೀತ ಬೇರೆ ಹೇಳಿಸಿದ್ದೀರಿ,

ಪರವಾಯಿಲ್ಲ!" ಎಂದು ಕಮಲಮ್ಮ ಒಂದು ಹಾಡು ಮುಗಿದ ಕೂಡಲೆ ಮೆಚ್ಚುಗೆಯ ನುಡಿಯಾಡಿದರು. "ಮೇಷ್ಟರನ್ನಿಟ್ಟು ಸಂಗೀತ ಹೇಳಿಸುವಷ್ಟು ಚೈತನ್ಯ ಇದೆಯೆ ಅಮ್ಮ ನಮಗೆ? ಅಲ್ಲಿ ಇಲ್ಲಿ ಕೇಳಿ ಕೇಳಿ ಕಲಿತದ್ದು" ಎಂದು ರಾಮಕೃಷ್ಣಯ್ಯನವರ ಹೆಂಡತಿ ಸಂಕೋಚಪಟ್ಟು ನುಡಿದರು. ಶಾಸ್ತ್ರೀಯವಾಗಿ ಸಂಗೀತಾಭ್ಯಾಸಮಾಡಿದ್ದವರ ಹಾಡಿಕೆಗೆ ಸಮನಾಗಿತ್ತು ರೋಹಿಣಿಯ ಹಾಡಿಕೆ. ಇದೂ ಸಹ ರಮೇಶನನ್ನು ಒಲಿಸಿಕೊಳ್ಳಲು ನೆರವಾಗಿತ್ತು.

ರೋಹಿಣಿ ಹಾಡಿದ ಕಡೆಯ ಹಾಡು, 'ಬಿನ್ನಹಕೆ ಬಾಯಿಲ್ಲವಯ್ಯ, ಅನಂತ ಅಪರಾಧ ಎನ್ನೊಳಿರಲಾಗಿ' ಎಂಬ ಪುರಂದರದಾಸರ ದೇವರನಾಮ. ರೋಹಿಣಿ ಭಾವಪೂರ್ಣವಾಗಿ ಈ ಕೃತಿಯನ್ನು ಹಾಡತೊಡಗಿದ್ದಳು. ಇದ್ದಕ್ಕಿದ್ದ ಹಾಗೆ ಅವಳ ಕಂಠರೋಧವಾಯಿತು; ಕಂಬನಿಗರೆಯುವುದಕ್ಕೆ ಮೊದಲಿಟ್ಟಳು. ಆಗ ಅಳು ಬರದಿದ್ದರೆ ಇನ್ನೊಂದೆರಡು ಹಾಡುಗಳನ್ನು ಹಾಡುತ್ತಿದ್ದಳೇನೋ. ಅಷ್ಟಕ್ಕೆ ಹಾಡಿಕೆ ನಿಂತಿತು. ಯಾಕೆ ಹಾಗೆ ಅತ್ತಳೋ ಯಾರೂ ಅರಿಯ ದಾದರು. "ಸಂಕೋಚ. ಎಂದೂ ಬೇರೆ ಕಡೆ ಹಾಡಿದವಳಲ್ಲ. ಹಾಡಿದ್ದು ಸರಿಹೋಯಿತೋ ಇಲ್ಲವೊ ಅಂತ ದಿಗಿಲುಪಟ್ಟಿದ್ದಾಳೆ ಅಂತ ಕಾಣುತ್ತೆ" ಎಂದು ರಾಮಕೃಷ್ಣಯ್ಯನವರು ಸಮಾಧಾನದ ವಾಕ್ಯವೊಂದನ್ನು ಆಡಿದರು. ಅತ್ತು ಕೆಂಪಾದ ರೋಹಿಣಿಯ ಕಣ್ಣು ಕೆನ್ನೆಗಳು ರಮೇಶನಿಗೆ ಮೋಹಕ ವಾಗಿಯೆ ಕಂಡುವು. ಅವಳ ಅಳುವಿನಲ್ಲಿಯೂ ಅದು ಏನೋ ಒಂದು ಬಗೆಯ ಗಾನಮಾಧುರ್ಯವೇ ರಮೇಶನ ಕಿವಿಗಳಲ್ಲಿ ಹೊಳಲಿಟ್ಟಿತು; ಅಬಲೆಯ ಆರ್ತನಾದಂತೆ ಧ್ವನಿಸಿತು ಅವಳ ಅಳು, ಅವನ ಗಂಡುಹೃದಯಕ್ಕೆ. ರಮೇಶ ಅವಳನ್ನು ಮನಸ್ಸಿನಲ್ಲಿ ಸಂಪೂರ್ಣವಾಗಿ ಒಪ್ಪಿಬಿಟ್ಟ.

ಮಾರನೆಯ ದಿನ ಉತ್ತರ ಹೇಳುವುದಾಗಿ ಕಮಲಮ್ಮ ಹೇಳಿದರು.

ಅಂದಿನ ರಾತ್ರಿಯೇ ತಾಯಿಮಕ್ಕಳ ನಡುವೆ ಮಾತುಕತೆ ನಡೆಯಿತು. ಎಲ್ಲರೂ ಒಪ್ಪುವ ರೀತಿಯೆ ಕಂಡುಬಂದಿತು. ಆದರೆ ರಮೇಶನ ಅತ್ತಿಗೆಯ ಟೀಕೆ ವಿರುದ್ಧವಾಗಿತ್ತು: 'ಹೆಣ್ಣು ಅತ್ತಳು. ಅವಳಿಗೆ ಇಷ್ಟವಿಲ್ಲವೋ ಏನೋ. ಅಲ್ಲದೆ, ಅತ್ತದ್ದು ಅಪಶಕುನ. ಹೆಣ್ಣು ನಾಚಬಹುದು; ಬಿಗುಮಾನ ತೋರ ಬಹುದು; ಬಿಂಕ ಮೆರೆಯಬಹುದು; ಹುಬ್ಬು ಗಂಟಿಕ್ಕಲೂ ಬಹುದು. ಅಳುವುದೆಂದರೇನು? ಅದು ಅಪಶಕುನ.'

" ನಾಚಿಕೆಗೇಡೇ ಸರಿ. ಧಾರೆಯೆರೆಯುವಾಗ ತಂದೆ ತಾಯಿ ಕಣ್ಣೀರಿನಲ್ಲೇ ಧಾರೆಯೆರೆಯುತ್ತಾರೆ. ಮನೆ ತುಂಬಿಸಿಕೊಡುವಾಗ ಎಲ್ಲರೂ ಅಳುವುದೇ! ಮದುವೆಮನೆಯಲ್ಲಿ ಅಳಬಹುದಂತೆ, ಯಾಕೋ ಏನೋ ಹೆಣ್ಣು ಈಗ ಅತ್ತರೆ ಏನು? ರಮೇಶ ಒಪ್ಪಿದರೆ ಸರಿ "—ಎಂದು ಕಮಲಮ್ಮ ಹೆಣ್ಣು ತಂದುಕೊಳ್ಳಲು ಒಪ್ಪಿದಂತೆಯೆ ನುಡಿದರು.

ರೋಹಿಣಿಯನ್ನು ಮದುವೆಯಾಗಲು ರಮೇಶ ಒಪ್ಪಿಯೇಬಿಟ್ಟ.

ಮದುವೆಯೂ ಆಯಿತು.

ಅಳು, ಅಳು, ಅಳು.

ಅಳುವಿನ ಹೊನಲಿನಲ್ಲಿಯೇ ತೇಲಿಬಂದಳು ರೋಹಿಣಿ ಗಂಡನ ಮನೆಗೆ.

ಮದುವೆಯಲ್ಲಿ ಹಸೆಮಣೆಯ ಮೇಲೆ ಅಳು; ಮನೆ ತುಂಬಿಸಿಕೊಳ್ಳುವಾಗ ಅಳು. ಕೆಲವು ತಿಂಗಳು ಕಳೆದ ಮೇಲೆ ಪ್ರಸ್ತದ ಉದ್ದಕ್ಕೂ ಅಳು. ಅವಳ ಅಳುವಿನ ಕಾರಣ ಅವಳೊಂದಿಗೆ ರಮೇಶ ತಲೆಯೂರಿದ್ದ ಅವಳ ಕಂಬನಿ ಕುಡಿದ ದಿಂಬಿಗೆ ಗೊತ್ತಿದ್ದಿತೋ ಏನೋ! ಹೇಳಲಾಗದ ರಹಸ್ಯವನ್ನು ರಮೇಶ ತನ್ನಲ್ಲಿಯೆ ಬಚ್ಚಿಟ್ಟುಕೊಂಡ. ಮನಸ್ಸಿಗೆ ನಿರಾಶೆಯಾಯಿತು, ನೋವಾಯಿತು: ಆದರೂ ರೋಹಿಣಿಯ ಮೇಲೆ ಅವನಿಗೆ ಕೋಪವಿಲ್ಲ.

ಉದ್ಯೋಗ ದೊರೆಯುವ ಮುನ್ನ ಒಂದೆರಡು ತಿಂಗಳು ರಮೇಶ ಅಣ್ಣನ ಮನೆಯಲ್ಲೆ ಇದ್ದ. ಅಣ್ಣನಿಗೆ ಬೇರೆಯ ಕಡೆ ವರ್ಗವಾಗಲು, ಅವನು ಒಂದು ಕೆಲಸ ಹುಡುಕಿಕೊಳ್ಳಬೇಕಾಯಿತು.

ಈಗ ರೋಹಿಣಿ ಗಂಡನೊಂದಿಗೆ ಸಂಸಾರ ಮಾಡುತ್ತಿದ್ದಾಳೆ. ತನ್ನ ಅಳಲ ಕಾರಣವನ್ನು ಕೈಹಿಡಿದ ಗಂಡನಿಗೆ ಹೇಳಿಕೊಳ್ಳಲು ಏಕಾಂತದ ಅವಕಾಶವಿದೆ. ಆದರೂ ಹೇಳಿಕೊಳ್ಳಲೊಲ್ಲಳು.

ಗಂಡ ತನ್ನ ಮೈ ಮುಟ್ಟಿದರೆ ಅಳುತ್ತಾಳೆ: ಕೆಂಡವಾಗುತ್ತದೆ ಅವನ ಕೈ ಸೋಂಕು.

ರೋಹಿಣಿಯ ನಿಲುಗಡೆಯಿಲ್ಲದ ಈ ಅಳುವಿನ ಸಂಗತಿ ಹೊರಪಡದೆ ಇರಲು ಸಾಧ್ಯವಿರಲಿಲ್ಲ. ಅವಳ ತಂದೆತಾಯಿಗಂತೂ ಅದು ಬಹುಮಟ್ಟಿಗೆ ಮೊದಲೇ ತಿಳಿದಿದ್ದ ಸಂಗತಿ. ರಮೇಶ ತನ್ನ ತಾಯಿ ಮತ್ತು ಅಣ್ಣನೊಂದಿಗೂ ತನ್ನ ಹಿಂಡತಿಯ ವಿಚಿತ್ರ ಸ್ವಭಾವವನ್ನು ಕುರಿತು ಸಂಕಟಪಟ್ಟು ಹೇಳಿ

ಕೊಂಡಿದ್ದ: "....ಎಲ್ಲದರಲ್ಲೂ ಸರಿ. ಅಡಿಗೆ, ಮನೆಯ ಒಪ್ಪ ಓರಣ, ನಡೆನುಡಿ ಎಲ್ಲ ನನಗೆ ಒಪ್ಪಾಗಿದೆ. ಒಂದೊಂದು ದಿನ....ರಾತ್ರಿಹೊತ್ತು.... ಇದ್ದಕ್ಕಿದ್ದ ಹಾಗೆ ಮಗುವಿನ ಹಾಗೆ ಅಳುತ್ತ ಕುಳಿತುಬಿಡುತ್ತಾಳೆ...."
"ಏನೋ ಅಪ್ಪ, ನನಗೆ ಅರ್ಥವಾಗುವುದಿಲ್ಲ. ಒಂದು ಯಂತ್ರವಾದರೂ ಕಟ್ಟಿಸಿನೋಡು" ಎಂದು ತಾಯಿ ಒಮ್ಮೆ ಬೆಂಗಳೂರಿಗೆ ಬಂದಿದ್ದಾಗ ಸಲಹೆ ಕೊಟ್ಟರು.

ರೋಹಿಣಿಗೆ ಭೀತಿಶಂಕೆಯ ಯಂತ್ರ ಕಟ್ಟಿಸಿದ್ದೂ ಆಯಿತು. ಅವಳ ಅಳು ಮಾತ್ರ ನಿಲ್ಲಲಿಲ್ಲ.

ರೋಹಿಣಿಯ ತಂದೆಯೂ ಈಗ ತುಮಕೂರಿಗೆ ವರ್ಗವಾಗಿ ಹೋಗಿದ್ದರು. ಅವರು ಒಮ್ಮೆ ಬಂದಿದ್ದಾಗ ಅವರಿಗೆ ರಮೇಶ್ ತನ್ನ ಹೆಂಡತಿಯ ಸ್ಥಿತಿಯನ್ನು ವಿವರಿಸಿ, "ಮದುವೆಗೆ ಮುಂಚೆಯೂ ಹೀಗೇ ಇದ್ದಳೇ?" ಎಂದು ಆತಂಕ ಗೊಂಡು ಕೇಳಿದ. "ಹೀಗೆ ಇರಲಿಲ್ಲವಲ್ಲ! ಏನೋ ಖಾಯಿಲೆ ಇರಬಹುದಪ್ಪ. ಹೆಂಗಸರ ಆಸ್ಪತ್ರೆಗೆ ತೋರಿಸಿನೋಡು. ಏನಾದರೂ ಟಾನಿಕ್ ಕೊಡಿಸಿದರೆ ಸರಿಹೋಗಬಹುದು" ಎಂದರು ರಾಮಕೃಷ್ಣಯ್ಯನವರು.

ಆಸ್ಪತ್ರೆಗೆ ಹೋಗಿ ತೋರಿಸಿಕೊಳ್ಳುವುದು ರೋಹಿಣಿಗೆ ಇಷ್ಟವಿಲ್ಲ. ಗಂಡನ ಬಲವಂತಕ್ಕೆ ಅವನೊಂದಿಗೆ ಆಸ್ಪತ್ರೆಗೆ ಹೋದಳು. ಹಾಗೆ ಹೋಗುವ ಮುನ್ನ ಅತ್ತಳು ಎಂದು ಬೇರೆ ಹೇಳಲೇಬೇಕಾಗಿಲ್ಲ.

ಲೇಡಿ ಡಾಕ್ಟರು ಈ 'ರೋದನ ರೋಗಿ'ಯನ್ನು ವಿವರವಾಗಿ ಪರೀಕ್ಷಿಸಿದರು; ಅವಳಿಗೆ ಅನೇಕ ಪ್ರಶ್ನೆಗಳನ್ನು ಹಾಕಿ ಬೇಸರಪಡಿಸಿದರು; ಒಂದೆರಡು ಅವಳನ್ನು ಅಳುವಂತೆಯೂ ಮಾಡಿದುವು. ರಮೇಶ ಹೇಳಿದ್ದು ಕಟ್ಟುಕತೆಯಲ್ಲ ಎಂದು ಅವರಿಗೆ ಖಚಿತವಾಯಿತು. ಆದರೂ ರೋಗನಿದಾನಮಾಡಲಾಗಲಿಲ್ಲ.

"Nervous Debility (ನರದೌರ್ಬಲ್ಯ) ಇರಬಹುದು ಕಣ್ರಿ. ಈ ಟಾನಿಕ್ ಕೊಡಿ, ಸರಿಹೋಗಬಹುದು" ಎಂದು ಲೇಡಿ ಡಾಕ್ಟರ್ 'ವಿಟಮಿನ್ ಬಿ ಕಾಂಪ್ಲೆಕ್ಸ್' ಬರೆದುಕೊಟ್ಟರು. ಅದರಿಂದ ಏನೂ ಪ್ರಯೋಜನ ವಾಗಲಿಲ್ಲ.

"ಹಿಸ್ಟೀರಿಯಾ ಇರಬಹುದು. ಮೆಂಟಲ್ ಆಸ್ಪತ್ರೆಗೆ ತೋರಿಸಿ

ನೋಡಯ್ಯಾ" ಎಂದು ಸಂಗತಿಯನ್ನು ಬಲ್ಲ ರಮೇಶನ ಆಪ್ತಮಿತ್ರರು ಸಲಹೆ ಮಾಡಿದರು.

'ಹೌದು, ಇರಬಹುದು' ಎನ್ನಿಸಿತು ರಮೇಶನಿಗೆ.

"ರೋಹಿಣಿ....ನಾಳೆ ಭಾನುವಾರ...."

"ಏನು ಸಿನಿಮಾಕ್ಕೆ ತಾನೆ?".

"ಅಲ್ಲ...."

"ಮತ್ತೆ...."

"ಹುಚ್ಚರಾಸ್ಪತ್ರೆಗೆ ನಿನ್ನನ್ನು ಕರೆದುಕೊಂಡು ಹೋಗಬೇಕು" ಎಂದು ಹೇಳಲು ಅವನಿಗೆ ಬಾಯಿಬರಲಿಲ್ಲ. ಹೇಳದೆ ಇದ್ದರೆ ವಿಧಿಯಿಲ್ಲ.

"ಒಂದು ಕಡೆಗೆ ಹೋಗಬೇಕಾಗಿದೆ....ಬರುತ್ತೀ ತಾನೆ...."

"ನಾನು ನಿಮ್ಮ ನೆರಳುತಾನೆ. ನೀವು ಹೋದಕಡೆಗೆ ಬಾ ಅಂದರೆ ಬರಬೇಕು. ಆದರೂ ಸುಮ್ಮನೆ ಒಂದು ಕಡೆಗೆ ಅಂದರೆ ಏನಂತ ತಿಳಿದುಕೊಳ್ಳಬೇಕು? ಇಂಥ ಕಡೆಗೆ ಅಂತ ಹೇಳಬಾರದೆ?" ಎಂದು ಸಮಾಧಾನಚಿತ್ತದಿಂದ, ನಗುನಗುತ್ತಲೇ ನುಡಿದಳು.

"ಹೋದ ಮೇಲೆ ತಾನೇ ಗೊತ್ತಾಗುತ್ತೆ. ಒಂಬತ್ತು ಗಂಟೆಯ ಹೊತ್ತಿಗೇ ಅಡಿಗೆ ಮಾಡಿಬಿಡು. ಹೋಟಲಿಂದ ಇಡ್ಡಲಿ ತಂದುಬಿಡುತ್ತೇನೆ; ತಿಂದುಕೊಂಡು ಹೋಗೋಣ. ಹಾಗೇ ಲಾಲ್‌ಬಾಗಿನಲ್ಲಿ ಸುತ್ತಾಡಿಕೊಂಡು...."

ರಮೇಶನ ಮಾತಿನಿಂದ ಏನೋ ವಿಹಾರ ಎಂದೇ ಬಗೆದಳು ರೋಹಿಣಿ. ಒಂದು ಭಾಗದಲ್ಲಿ ಅವನನ್ನು ತೃಪ್ತಿಗೊಳಿಸಲು ಅವಳು ಹಿಂದೆಗೆದಿದ್ದಳೇ ಹೊರತು, ಸರ್ವ ವಿಧದಿಂದಲೂ ಪತಿಯ ಇಷ್ಟಾನುವರ್ತಿಯಾಗಿ ನಡೆದುಕೊಳ್ಳಬೇಕೆಂದೇ ಎಂದಿನಿಂದಲೂ ಅವಳ ಮನಃಪೂರ್ವಕ ಪ್ರಯತ್ನ. ರಮೇಶನಿಗಿಂತ ಒಳ್ಳೆಯ ಗಂಡನನ್ನು ಪಡೆಯುವುದು ಸಾಧ್ಯವಿರಲಿಲ್ಲ ಎಂದು ಮನದಟ್ಟಾಗಿದ್ದಿತು ಅವಳಿಗೆ. ಹೆಂಡತಿಯಾಗಿಯೂ ಹೆಂಡತಿಯಂತೆ ನಡೆದುಕೊಳ್ಳದೆ ಇದ್ದ ತನ್ನೊಂದಿಗೆ ಬಾಳ್ವೆ ಮಾಡುತ್ತಿರಬೇಕಾದರೆ ಅವನ ಸಹನೆ ಎಷ್ಟು!

ರಮೇಶನೊಂದಿಗೆ ಹೋಗಲು ರೋಹಿಣಿ ಒಪ್ಪಿಕೊಂಡಳು.

ಭಾನುವಾರ ಬೆಳಗ್ಗೆ ವಿಹಾರ ವಿನೋದಗಳಿಂದಲೆ ಪ್ರಾರಂಭವಾಯಿತು. ಲಾಲ್‌ಬಾಗಿನ ಉತ್ತರದ ಗೇಟಿನ ಬಳಿ ಗಾಡಿ ಮಾಡಿಕೊಂಡು ಹುಚ್ಚರಾಸ್ಪತ್ರೆ

ಯನ್ನು ತಲಪಿ, ಅಲ್ಲಿ ಮುಖ್ಯವೈದ್ಯರನ್ನು ಹುಡುಕಿಕೊಂಡು ಅಲೆದಾಡಿದಾಗ ಸ್ಥಳ ಯಾವುದೆಂದು ರೋಹಿಣಿಗೆ ಖಚಿತವಾಯಿತು.

"ಇದೇ ತಾನೆ, ಒಂದು ಕಡೆ, ನನ್ನನ್ನ ಕರೆದುಕೊಂಡು ಬರಬೇಕು ಅಂತ ಇದ್ದದ್ದು?" ಎಂದು ರೋಹಿಣಿ ಪ್ರಶ್ನಿಸಿದಳು.

ರಮೇಶ ಮೌನವಾಗಿದ್ದ.

"ನಿಮಗೇನಾದರೂ ಹುಚ್ಚುಗಿಚ್ಚು ಹಿಡಿದಿದೆಯೋ ಹೇಗೆ? ಇಲ್ಲಿಗೆ, ಎಲ್ಲಾ ಬಿಟ್ಟು—"

"ಅಯ್ಯೋ ಹುಚ್ಚಿ, ಸ್ವಲ್ಪ ಸುಮ್ಮನಿರಬಾರದೆ? ಇಲ್ಲಿ ಕುಳಿತಿರು, ಬೇಗ ಬಂದುಬಿಟ್ಟೆ" ಎಂದು ರಮೇಶ ರೋಹಿಣಿಯನ್ನು ಒಂದು ಬೆಂಚಿನ ಮೇಲೆ ಕೂರಿಸಿ, ಆಸ್ಪತ್ರೆಯ ಸೂಪರಿಂಟೆಂಡೆಂಟರನ್ನು ಕಾಣಲು ಹೋದ.

ಅಲ್ಲಿ ಅವರಿಗೆ ರಮೇಶ ತನ್ನ ಹೆಂಡತಿಯ ಅಳುವಿನ ಪ್ರಸಂಗವನ್ನು ವಿವರಿಸಿ ಹೇಳಿದ. ಅವರು ಹಾಕಿದ ಪ್ರಶ್ನೆಗಳಿಗೆಲ್ಲ ರಮೇಶ ಸರಿಯಾದ ಉತ್ತರ ಗಳನ್ನೇ ಒದಗಿಸಿದ. ಆದರೆ, ಈ ಪ್ರಶ್ನೋತ್ತರಗಳಿಂದ ನಿಜಾಂಶ ನುಣುಚಿ ಕೊಂಡೇ ಇತ್ತು.

'ರೋದನ ರೋಗಿ' ಇದ್ದ ಕಡೆಗೇ ಡಾಕ್ಟರು ರಮೇಶನೊಂದಿಗೆ ಬಂದರು; ಲೋಕಾಭಿರಾಮವಾಗಿ, ಮನೋರೋಗಕ್ಕೆ ಸಂಬಂಧಪಟ್ಟ ಪ್ರಶ್ನೆ ಗಳು ಎಂದು ಸುಳಿವು ಕೊಡದ ಹಲವಾರು ಪ್ರಶ್ನೆಗಳನ್ನು ರೋಗಿಗೆ ಹಾಕಿದರು. ರೋಹಿಣಿ ಕೊಟ್ಟ ಉತ್ತರಗಳೆಲ್ಲ ಸಮಂಜಸವಾಗಿಯೆ ಇದ್ದುವು. ಯಾವ ಬಗೆಯಲ್ಲಿಯೋ ಆಗಲಿ ಅವಳ ಚಿತ್ತಸ್ವಾಸ್ಥ್ಯ ಕೆಟ್ಟಿದೆಯೆಂದು ಶಂಕಿಸಲು ವೈದ್ಯರಿಗೆ ಕಾರಣ ತೋರಲಿಲ್ಲ. ಹಾಗಾದರೆ, ತನ್ನ ಹೆಂಡತಿಯ ಬಗ್ಗೆ ರಮೇಶ್ ಹೇಳುವುದೇ ಸುಳ್ಳೋ? ರೋಹಿಣಿಯ ಅರ್ಥವಿಲ್ಲದ! ರೋದನಕ್ಕೆ ಕಾರಣವೇನು? ಅವಳನ್ನು ಕೆಲವು ಕಾಲ ಆಸ್ಪತ್ರೆಯಲ್ಲೇ ಇಟ್ಟುಕೊಂಡು ಪರೀಕ್ಷಿಸುವುದು ಒಳ್ಳೆಯದೆಂದು ವೈದ್ಯರು ನಿರ್ಧರಿಸಿದರು.

"ನಿಮ್ಮ ಯಜಮಾನರು ಒಪ್ಪಿಗೆ ಕೊಟ್ಟಿದ್ದಾರೆ. ನೀವು ಒಂದೆರಡು ದಿನ ಇಲ್ಲಿಯೇ...."

ಕೆನ್ನೆಗೆ ಹೊಡೆದಂತೆ ಭಾಸವಾಯಿತು ರೋಹಿಣಿಗೆ. ಕೋಪಗೊಂಡು ಸಿಟಿತು ನುಡಿದಳು:

“ನನ್ನ ಯಜಮಾನರೂ ನೀವೂ ಸೇರಿಕೊಂಡು ನನ್ನನ್ನು ಹುಚ್ಚಿಯಾಗಿ ಮಾಡಬೇಕು ಅಂತ ಮಾಡಿಕೊಂಡಿದ್ದೀರೋ ?”

ಎಷ್ಟೋ ಮಂದಿ ನಿಜವಾದ ಹುಚ್ಚರೇ ಹೀಗೆ ಮಾತಾಡಿದ್ದನ್ನು ವೈದ್ಯರು ಚೆನ್ನಾಗಿ ಬಲ್ಲರು. ರೋಹಿಣಿಗೆ ಹುಚ್ಚಿಲ್ಲವೆಂದೂ ಅವರಿಗೆ ಮನವರಿಕೆಯಾಗಿತ್ತು. ರಮೇಶ ಹೇಳಿದ್ದು ನಿಜವಾಗಿದ್ದರೆ, ಈಗಲ್ಲದಿದ್ದರೆ ಮುಂದಾದರೂ ಹುಚ್ಚು ಹಿಡಿಯಬಹುದೆಂದು ವೈದ್ಯರು ಶಂಕಿಸಿದರು. ಅವಳ ಅಳುವಿನ ಮೂಲಕಾರಣವನ್ನು ಕಂಡುಹಿಡಿದು, ಅದು ನಿಲ್ಲುವ ಹಾಗೆ ಮಾಡಿ, ಅವಳ ಭವಿಷ್ಯವನ್ನು ಸಂರಕ್ಷಿಸಬೇಕೆಂದು ಅವರು ಕುತೂಹಲಗೊಂಡಿದ್ದರು. ಅವಳ ಅಳುವಿನ ಮೂಲ ಅವಳ ಮನಸ್ಸಿನಲ್ಲಿಯೇ ಹುದುಗಿದೆಯೆಂಬುದರಲ್ಲಿ ಅವರಿಗೆ ಸಂದೇಹವಿರಲಿಲ್ಲ.

“ಹಾಗಾದರೆ ನಾನು ಕೇಳುವ ಈ ಪ್ರಶ್ನೆಗೆ ಉತ್ತರ ಹೇಳಿ. ನೀವು ಆಗಾಗ್ಗೆ ಕಾರಣವಿಲ್ಲದೆ ಅಳುತ್ತ ಕುಳಿತುಬಿಡುತ್ತೀರಂತಲ್ಲ? ಹೌದೋ?”

ರೋಹಿಣಿಯ ಮುಖ ತಗ್ಗಿತು ; ವಿವರ್ಣವಾಯಿತು.

“ಕಾರಣವಿಲ್ಲದೆ ಅತ್ತರೆ, ನಕ್ಕರೆ....ನಿಮಗೆ ಗೊತ್ತೇ ಇದೆ ಅಂತ ಕಾಣುತ್ತೆ. ಆದ್ದರಿಂದ, ನೀವು ಅಳುವುದು ನಿಜವೇ ಆದರೆ, ಅದಕ್ಕೆ ಕಾರಣ ಇರಬೇಕಲ್ಲ. ದುಃಖದ ಕಾರಣ ಏನಾದರೂ ಇದ್ದರೆ ಅದನ್ನು ಬಚ್ಚಿಟ್ಟು ಕೊಳ್ಳುವುದು ಒಳ್ಳೆಯದಲ್ಲ. ಅದರ ಮೂಲಕಾರಣ, ನಿಮ್ಮ ಯಾವುದಾದರೂ ತೀರದ ಆಶೆಯೋ ಹಳೆಯ ಕಹಿ ನೆನಪೋ ಏನಾದರೂ ಇದ್ದರೆ, ನನಗೆ ಹೇಳಬೇಡಿ ; ನಿಮ್ಮ ಯಜಮಾನರಲ್ಲಿಯಾದರೂ ಹೇಳಿಕೊಳ್ಳಿ. ಅವರಿಗೂ ತಿಳಿಸಬಾರದ್ದೂ ಇದ್ದೀತೆ ? ಖಂಡಿತ ಇರಲಾರದು, ಅಲ್ಲವೇ ?....”

“ಡಾಕ್ಟರೇ, ಡಾಕ್ಟರೇ, ನಿಮ್ಮ ದಮ್ಮಯ್ಯ, ನೀವಿಬ್ಬರೂ ಸೇರಿಕೊಂಡು ನನಗೆ ಹುಚ್ಚು ಹಿಡಿಸುತ್ತ ಇದ್ದೀರಿ. ಇನ್ನು ಒಂದು ಕ್ಷಣ ಇಲ್ಲಿ ಇದ್ದರೂ ನನಗೆ....ಅಯ್ಯೋ ಅಯ್ಯೋ....” ಎಂದು ರೋದಿಸತೊಡಗಿದಳು.

ವೈದ್ಯರು ಮೇಲಕ್ಕೆದ್ದು, ರಮೇಶನನ್ನು ಒಂದು ಮಾರಾಚೆ ಕರೆದು ಕೊಂಡು ಹೋಗಿ ಪಿಸುಮಾತಿನಲ್ಲಿ ಹೇಳಿದರು :

“ಏನೂ ಗಾಬರಿ ಪಡಬೇಡಿ. ಅವರ ಅಳುವಿಗೆ ಕಾರಣವಿಲ್ಲದೆ ಇಲ್ಲ. ನೀವೇ ಹೇಗಾದರೂ ಉಪಾಯದಿಂದ ಅದನ್ನು ಹೊರಪಡಿಸಿದರೆ, ಅಳುವೂ

ಅಳುವೂ ನಿಂತೀತು. ಅವರನ್ನು ಸದಾ ಸಂತೋಷವಾಗಿಟ್ಟಿರಿ. ನೀವೇ ಅವರ ವೈದ್ಯರಾಗಬೇಕು...."

× × × ×

ರಮೇಶ್ ರೋಹಿಣಿಯನ್ನು ಸಂತೋಷವಾಗಿರಿಸಲು ಎಂದಿನಿಂದಲೂ ಪ್ರಯತ್ನಿಸಿದ್ದ. ಅಂದು ಮನೆಗೆ ಹಿಂದಿರುಗಿ ಊಟ, ಮಧ್ಯಾಹ್ನದ ಕಾಫಿ ಎಲ್ಲ ಮುಗಿದ ಮೇಲೆ ಸಿನಿಮಾಕ್ಕೆ ಹೋಗೋಣ ಎಂದು ರಮೇಶ್ ರೋಹಿಣಿಗೆ ಹೇಳಿದ. ಎಷ್ಟು ಬಲವಂತ ಮಾಡಿದರೂ ಅವಳು ಒಪ್ಪಲಿಲ್ಲ. 'ನೀವು ಹೋಗಿಬನ್ನಿ. ನನಗೇನೂ ಹುಚ್ಚು ಹಿಡಿದೂ ಇಲ್ಲ, ಹಿಡಿಯುವುದೂ ಇಲ್ಲ. ಗಾಬರಿಯಾಗಬೇಡಿ. ಆದರೂ...."

"ಏನು ಆದರೂ....?"

"ಏನೂ ಇಲ್ಲ. ನನ್ನಿಂದ ನಿಮಗೆ ಸುಖ ಇಲ್ಲ. ನೀವು ಇನ್ನೊಂದು ಮದುವೆಯಾದರೂ ಮಾಡಿಕೊಂಡುಬಿಡಿ...."

"ನಿನಗೇನು ಬುದ್ಧಿ ಗಿದ್ಧಿ ಇದೆಯೋ ಇಲ್ಲವೋ ?"

"ಇಲ್ಲ ಅಂತ ಹೇಗೂ ನಿಮಗೆ ಅನುಮಾನವಾಗಿದೆಯಲ್ಲ. ಅದಕ್ಕೆ ಹೇಳಿದೆ...."

"ಹೋಗಲಿ, ಆ ಮಾತು ಈಗ ಯಾಕೆ? ಸಿನಿಮಾಕ್ಕೆ ಬರುತ್ತೀಯೋ ಇಲ್ಲವೊ ?"

"ಇನ್ನೊಂದು ದಿನ ಬಂದರಾಯಿತು. ನೀವು ಹೋಗಿಬನ್ನಿ, ಇವೊತ್ತು" ಎಂದು ಸಮಾಧಾನಳಾಗಿ ನುಡಿದಳು ರೋಹಿಣಿ.

× × × ×

ರೋಹಿಣಿಯನ್ನು ಬಿಟ್ಟು ಸಿನಿಮಾಕ್ಕೆ ಹೋಗಲು ಅವನಿಗೆ ಮನಸ್ಸಾಗ ಲಿಲ್ಲ. ಅಲ್ಲದೆ, 'ಮ್ಯಾಟನಿ' ಪ್ರದರ್ಶನದ ಹೊತ್ತು ಮೀರುತ್ತಲೂ ಬಂದಿತ್ತು.

"ಹೋಗಲಿ, ಸಿನಿಮಾ ಬೇಡ. ಲಾಲ್ ಬಾಗಿಗಾದರೂ ಹೋಗೋಣ ಬಾ."

"ಇದೇನೂ ಅಂದ್ರೆ! ಬೆಳಗ್ಗೆ ತಾನೆ ಹೋಗಿದ್ದೆವಲ್ಲ! ನಾನು ಎಲ್ಲಿಗೂ ಬರೋದಿಲ್ಲ; ಸುಮ್ಮನೆ ಬಲವಂತಮಾಡಬೇಡಿ."

ರಮೇಶ್ ಸಂಜೆ ತಿರುಗಾಡಿಕೊಂಡು ಬರಲು ಮನೆಬಿಟ್ಟು ಒಬ್ಬನೇ ಹೊರಟ. ಅವನ ತಲೆಯಲ್ಲಿ ಅಂದು ರೋಹಿಣಿಯ ಆಲೋಚನೆಯೆ ತುಂಬಿತ್ತು. ಅಲ್ಲಿ ಇಲ್ಲಿ ಸುತ್ತಾಡಿ ಮನೆಗೆ ಹಿಂದಿರುಗುವ ಹೊತ್ತಿಗೆ ರಾತ್ರಿ ಎಂಟಾಗಿತ್ತು. ಹಿಂದುಗಡೆಯ ಸಣ್ಣ ಮನೆ. ರಾತ್ರಿಯ ವೇಳೆ ಜೊತೆಗೆ ಯಾರೂ ಇಲ್ಲದೆ, ಬಾಗಿಲನ್ನು ಭದ್ರಪಡಿಸಿಕೊಂಡು ದೀಪ ಹಾಕಿಕೊಂಡು ಕುಳಿತಿರುತ್ತಿದ್ದುದು ರೋಹಿಣಿಯ ಪದ್ಧತಿ. ರಮೇಶ "ಲೇ, ಬಾಗಿಲು, ಬಾಗಿಲು ತೆಗೆಯೇ" ಎಂದು ಕೂಗಿದರೂ, ರೋಹಿಣಿ "ಯಾರು, ಯಾರು ?" ಎಂದು ಮರಮರಳಿ ಪ್ರಶ್ನಿಸಿ, ರಮೇಶನ ಧ್ವನಿ ಎಂದು ಖಚಿತಪಡಿಸಿಕೊಂಡು ಬಾಗಿಲು ತೆಗೆಯು ತ್ತಿದ್ದಳು. ಎಂದಿನ ರೂಢಿಯಂತೆ ಇಂದೂ ಮನೆಯ ದೀಪ ಉರಿಯುತ್ತಿದ್ದಿತು. ರಮೇಶ ಹಿಂದಿರುಗಿದವನೇ, ಎಂದಿನಂತೆ 'ಬಾಗಿಲು ತೆಗಿ' ಎಂದು ಕೂಗಿದ. ಮೂರು ನಾಲ್ಕು ಸಲ ಕೂಗಿದರೂ ರೋಹಿಣಿ ಉತ್ತರ ಕೊಡದಿರಲು ಬಲವಾಗಿ ಬಾಗಿಲನ್ನು ತಟ್ಟಿ ಕೂಗಿದ. ತಟ್ಟಿದ ಮಾತ್ರಕ್ಕೇ ಬಾಗಿಲು ತಾನಾಗಿ ತೆರೆಯಿತು. ಬಾಗಿಲ ಚಿಲಕ ಹಾಕಿಕೊಳ್ಳುವುದನ್ನು ಮರೆತು, ಚಾಪೆಯ ದಿಂಬಿನ ಮೇಲೆ ತಲೆಯೂರಿ ರೋಹಿಣಿ ಗಾಢನಿದ್ರೆಯಲ್ಲಿ ಮಲಗಿದ್ದಳು. ವಿದ್ಯುದ್ದೀಪದ ಬೆಳಕಿನಲ್ಲಿ ಅವಳ ಮುದ್ದುಮುಖ ಮೋಹಕವಾಗಿ ಕಂಡಿತು ರಮೇಶನಿಗೆ. ಮೆಲ್ಲನೆ ಅವಳ ಬಳಿ ಸಾರಿ, ಸದ್ದಾಗದಂತೆ ಅವಳ ಬಳಿ ಕುಳಿತ; ಅವಳ ಮುಖವನ್ನು ಕ್ಷಣಕಾಲ ನಿಟ್ಟಿಸುತ್ತ ಕುಳಿತ. ದಿಂಬಿನ ಅಡಿಯಲ್ಲಿ ಬೆಳ್ಳನೆಯ ಕಾಗದದ ಮಡಿಕೆ ಇಣಿಕಿ ನೋಡುತ್ತಿತ್ತು. ಕುತೂಹಲದಿಂದ ರಮೇಶ ಅದನ್ನು ಕೈಗೆತ್ತಿಕೊಂಡು, ಮಡಿಕೆ ಬಿಚ್ಚಿದ. ರೋಹಿಣಿಯ ಅಕ್ಷರ; ಅವಳೇ ಬರೆದದ್ದು, ಸಂಶಯವಿಲ್ಲ. ಓ, ಆಚೆಯ ಪಕ್ಕದಲ್ಲಿ ತನ್ನ ಅಗ್ಗದ ಫೌಂಟನ್‌ಪೆನ್ನೂ ಮುಚ್ಚದೆ ಹಾಗೆಯೇ ಮಲಗಿದೆ! ಅವಳು ಬರೆದು ಮಲಗಿರಬೇಕು. ಬರಹ ಮುಗಿದೂ ಇರಲಿಲ್ಲ; ಮುಂದೇನು ಬರೆಯುವುದು ಎಂದು ಯೋಚನೆಯಲ್ಲಿ ನಿದ್ದೆ ಹತ್ತಿರಬೇಕು. ಅಲ್ಲಲ್ಲೆ ಕೆಲವು ಅಕ್ಷರಗಳು ಕಲಸಿಹೋಗಿವೆ. ಆದರೂ ಓದಬಹುದು. ಅದು ಯಾಕೆ ಕಲಸಿಹೋಗಿವೆ ? ಅವನ ಗಮನ ದಿಂಬಿನ ಒದ್ದೆಯಾದ ಭಾಗದ ಕಡೆಗೆ ಹೊರಳಿತು. ಒದ್ದೆಯಾಗಿದೆಯೋ, ಅಥವಾ ಜಿಡ್ಡಿನ ಕಲೆಯೋ ? ಮುಟ್ಟಿನೋಡಿದ. ಹೌದು, ಇನ್ನೂ ಒದ್ದೆಯಾಗಿಯೇ ಇದೆ. ಕಾಗದ ಬರೆಯುತ್ತ ಕಂಬನಿ ಸುರಿದಿರಬೇಕು. ಅದಕ್ಕೇ ಅಕ್ಷರ ಅಲ್ಲಲ್ಲಿ

ಕಲಿಸಿಹೋಗಿದೆ. ಕಾಗದವನ್ನು ಮುಗಿಸದೆ ದಿಂಬಿನ ಕೆಳಗಿಟ್ಟು, ಅಳುತ್ತಲೇ ಮಲಗಿರಬೇಕು. ಅತ್ತು ಅತ್ತು ನಿದ್ದೆ ಬಂದಿರಬೇಕು. ದಿಂಬಿನ ಕಂಬನಿಯ ಕತೆಗೆ ಅರೆಬರೆವ ಕಾಗದವೇ ಸಾಕಷ್ಟು ಸಾಕ್ಷ್ಯವಾಗಿತ್ತು. ಅದನ್ನವನು ಓದಿಕೊಂಡ :

" ....ಪಾದಪದ್ಮಂಗಳಲ್ಲಿ. ಸೇವಕಿಯ ಅನಂತ ಪ್ರಣಾಮಗಳು.

" ನನ್ನ ನಿತ್ಯದ ಅಳುವಿಗೆ ಕಾರಣ ತಿಳಿಯಲು ನೀವು ಸಾಹಸಪಡು ತ್ತಿದ್ದೀರಿ. ಅದನ್ನು ತಿಳಿಸುವ ಮುನ್ನ ನಿಮಗೆ ಇನ್ನೊಂದು ಮದುವೆ ಮಾಡಿಸ ಬೇಕು; ಆಮೇಲೆ ತಿಳಿಸಿದರೂ ಬಾಧಕವಿಲ್ಲ—ಎಂದುಕೊಂಡಿದ್ದೆ. ಆದರೆ ನಿಮ್ಮ ಮನಸ್ಸು ಇನ್ನೊಂದು ಮದುವೆಯ ಕಡೆಗಿಲ್ಲ. ಕಾರಣ ತಿಳಿಸಿ, ಕಣ್ಣು ಮುಚ್ಚುವ ದಾರಿ ಹುಡುಕಿಕೊಳ್ಳುತ್ತೇನೆ. ಆಮೇಲಾದರೂ ನೀವು ಇನ್ನೊಂದು ಮದುವೆಯಾಗಿ, ನನ್ನಿಂದ ಪಡೆಯಲಾಗದ ಸುಖವನ್ನು ಪಡೆಯಿರಿ.

" ನನ್ನದು ಎಂಜಲುಮೈಯಿ. ನಿಮಗದು ಸಲ್ಲದು. ಅದರ ಕಥೆ ನಮ್ಮ ತಂದೆ ತಾಯಿಗೂ ಪೂರ್ತಿ ಗೊತ್ತಿಲ್ಲ. ನಾನು ಕೆಲವು ದಿನ ಕಣ್ಮರೆಯಾಗಿದ್ದುದು ಮಾತ್ರ ಅವರಿಗೆ ಗೊತ್ತು. ಪೋಲೀಸಿನವರು ನನ್ನನ್ನು ನನ್ನ ತಂದೆತಾಯಿಗಳ ವಶಕ್ಕೆ ಒಪ್ಪಿಸಿ, ನಡೆದದ್ದನ್ನೆಲ್ಲ ನನ್ನ ಎದುರಿಗೆಯೇ ಅವರಿಗೆ ತಿಳಿಸಿದರು. ಸೂಳೆಗಾರಿಕೆಯ ವೃತ್ತಿಗೆ ಎಳೆಯುವುದಕ್ಕೊ, ಇಲ್ಲ ದುಷ್ಟಧನಿಕರಿಗೆ ಕನ್ನೆಯ ರನ್ನು ಒದಗಿಸುವ ದುರ್ವ್ಯಾಪಾರಕ್ಕೋ ಹೂಡಿದ್ದ ಸಂಚಿಗೆ ನಾನು ಬಲಿಯಾದೆ. ನನ್ನ ಸ್ನೇಹಿತೆ ಒಬ್ಬಳು ಒಂದು ದಿನ ನನ್ನನ್ನು ತಾನು ನೃತ್ಯ ಸಂಗೀತ ಕಲಿಸುವ ಶಾಲೆ ಎಂದು ಹೇಳಿ ಒಂದು ಮನೆಗೆ ಕರೆದುಕೊಂಡು ಹೋದಳು. ರಾತ್ರಿ ಇದ್ದಕ್ಕಿದ್ದ ಹಾಗೆ ಅವಳು ಕಣ್ಮರೆಯಾಗಿದ್ದಳು. ನನ್ನ ಜೊತೆಗೆ ಇನ್ನೂ ಇಬ್ಬರು ಮೂವರು ಹುಡುಗಿಯರಿದ್ದರು. ಅವರ ಮುಖವೂ ಸಪ್ಪೆ. ಅವರೂ ನನ್ನ ಹಾಗೆಯೆ ಬಲೆಗೆ ಬಿದ್ದ ಹಕ್ಕಿಗಳು ಎಂದು ಆಮೇಲೆ ನನಗೆ ಗೊತ್ತಾಯಿತು. ಅದೇ ರಾತ್ರಿ, ನಮ್ಮನ್ನು ಮನೆಗೆ ಬಿಡುವುದಾಗಿ ಹೇಳಿ ಯಾರೋ ನಮ್ಮನ್ನು ದೊಡ್ಡ ಕಾರಿನಲ್ಲಿ ಕರೆದೊಯ್ದರು. ನಗರ ಮಧ್ಯದಲ್ಲಿ ಒಂದು ದೊಡ್ಡ ಉಪ್ಪರಿಗೆಯ ಮನೆ ನಮ್ಮ ಬಿಡಾರವಾಯಿತು. ನಮಗೆ ದಿಕ್ಕೇ ತೋರಲಿಲ್ಲ; ಏನು ಸಂಗತಿಯೆಂದು ತಿಳಿಯಲಿಲ್ಲ. ಆಮೇಲೆ ಗೊತ್ತಾಯಿತು ಅದು ಒಂದು ಹೋಟಲು ಎಂದು. ಅಂದಿನ ರಾತ್ರಿ ನಮಗೆಲ್ಲ ಉಪವಾಸ. ಮಾರನೆಯ

ದಿನದಿಂದ ರಾಜೋಪಚಾರ. ಮೂರು ನಾಲ್ಕು ದಿನ ನಾವು ಒಟ್ಟಿಗೆ ಇದ್ದೆವು—ಒಂದು ಕೋಣೆಯಲ್ಲಿ, ಬಂದಿಗಳಂತೆ. ಒಬ್ಬಳು ಕಿರಿಚಿಕೊಳ್ಳತೊಡಗಿದಳು; ಅವಳನ್ನು ಬೇರೆ ಮಾಡಿದರು. ನಾನು ಸುಮ್ಮನೆ ಅಳತೊಡಗಿದೆ. ಅಂದಿನಿಂದ ಪ್ರಾರಂಭವಾಯಿತು ನನ್ನ ಅಳು. ಒಂದು ರಾತ್ರಿ, ನಾನು ಅತ್ತು ಅತ್ತು ಮೈಮರೆತು ಮಲಗಿದ್ದಾಗ ನಡೆಯಿತು ಅತ್ಯಾಚಾರ—ಅವನೊಬ್ಬ ಧನಿಕಪಶು. ಅಂದು ನಾನು ಕೆಟ್ಟೆ. ಆಮೇಲೆ ಬಂದರು—ಒಬ್ಬ ಸೇಟ್, ಒಬ್ಬ ತರುಣ ವಿದ್ಯಾರ್ಥಿ. ಆದರೆ, ಯಾರೂ ನನ್ನನ್ನು ಇನ್ನು ಕೆಡಿಸಲು ಅವಕಾಶಕೊಡಲಿಲ್ಲ; ನನ್ನ ಅಳುವೇ ನನಗೊಂದು ರಕ್ಷೆಯಾಗಿ ಪರಿಣಮಿಸಿತ್ತು. ಅಳು, ಅಳು, ಅಳು—ಎಷ್ಟು ಅತ್ತೇನೋ ದೇವರೇ ಬಲ್ಲ....ಆ ಮೇಲೆ ನನಗೆ ಜ್ಞಾಪಕ ಇರುವುದು, ಪೋಲೀಸರು ಬಂದು ನನ್ನನ್ನು ಬಿಡಿಸಿಕೊಂಡು ಹೋದದ್ದು. ನಮ್ಮ ತಂದೆ ಪೋಲೀಸರಿಗೆ ದೂರು ಕೊಟ್ಟಿದ್ದರು. ಯಾರೋ ದುಷ್ಟರು ಕನ್ಯಾಪಹಾರ ಮಾಡಿದರೆಂದು ಮಾತ್ರ ವ್ಯಥೆಗೊಂಡರು; ನಾನು ದೊರೆತಾಗ ಮತ್ತೆ ಹಡೆದಂತೆ ಸಂತಸಗೊಂಡರು. ನಾನು ಕೆಟ್ಟಿದ್ದು ಮಾತ್ರ ಅವರಿಗೂ ತಿಳಿಯದು. ಅವರು ಪ್ರಶ್ನಿಸಲೂ ಇಲ್ಲ, ನಾನು ಹೇಳಲೂ ಇಲ್ಲ. ಯಾವ ಬಾಯಿಂದ ತಿಳಿಸಲಿ? ನಾವು ಮದುವೆಯಾಗುವ ಮುನ್ನ ನಿಮ್ಮನ್ನು ನೋಡಿದಾಗ, ನೀವು ನನ್ನನ್ನು ಒಪ್ಪಿದಿರಿ ಎಂದು ನಿಮ್ಮ ನೋಟದಿಂದಲೇ ನನಗೆ ಗೊತ್ತಾದಾಗ, ನಿಮಗೆ ಮೋಸಮಾಡುತ್ತಿದ್ದೇನಲ್ಲಾ ಎಂದು ದುಃಖವಾಯಿತು; ಅತ್ತೆ. ಆದರೂ, ಅದು ಏಕೋ ಹೇಗೋ ನಿಮ್ಮ ಕೈಹಿಡಿಯಲು ಒಪ್ಪಿದೆ; ಕೈಹಿಡಿದಾಯಿತು. ಆದರೆ...."

ಕಾಗದ ಇಲ್ಲಿಗೆ ನಿಂತುಹೋಗಿತ್ತು. ಇಷ್ಟೇ ತಕ್ಕಮಟ್ಟಿಗೆ ದೀರ್ಘವಾಗಿತ್ತು. ಏನಿಲ್ಲದಿದ್ದರೂ ಅಕ್ಷರಕ್ಕೊಂದಾದರೂ ಕಂಬನಿ ಉದುರಿದೆ ಎಂದು ರಮೇಶ್ ಬಗೆದ.

ರಮೇಶನಿಗೆ ಏನೋ ಸ್ಫೂರ್ತಿ ಬಂದಂತಾಯಿತು. ತಾನೊಂದು ಕಾಗದವನ್ನು ತೆಗೆದುಕೊಂಡು, ಮೂರೇ ವಾಕ್ಯ ಬರೆದು ಅವಳ ಕಾಗದದೊಂದಿಗೆ ಇಟ್ಟ:

"ನಿನ್ನ ವಿಚಾರವೆಲ್ಲ ತಿಳಿದಹಾಗಾಯಿತು. ನಿನ್ನ ತಪ್ಪು, ಹೊಣೆ ಏನೂ ಇಲ್ಲ. ನಾನು ಈಗಲೂ ನಿನ್ನನ್ನು ನೀನು ಇರುವಹಾಗೆಯೇ ಸ್ವೀಕರಿಸಲು ಸಿದ್ಧನಾಗಿದ್ದೇನೆ. ಇನ್ನು ನೀನು ಅಳಲು ಕಾರಣವಿಲ್ಲ. ನಿನ್ನ ರಮೇಶ."

ರಮೇಶ ರೋಹಿಣಿಯನ್ನು ಎಬ್ಬಿಸದೆ, ಮುಂಬಾಗಿಲ ಚಿಲಕ ಹಾಕಿಕೊಂಡು, ತನ್ನ ಕೋಣೆಗೆ ಹೋಗಿ ಮಲಗಿದ. ಅಂದಿನ ರಾತ್ರಿ ಇಬ್ಬರಿಗೂ ಉಪವಾಸ.

× × × ×

ಒಂದು ವರ್ಷವಾದ ಮೇಲೆ ರಮೇಶನಿಗೆ ಮತ್ತೆ ಅಳು ಕೇಳಿಬಂದಿತು. ರೋಹಿಣಿಯದಲ್ಲ: ಅವಳು ಹೆತ್ತ ತನ್ನ ಮಗುವಿನದು.

*

# ಅದೃಷ್ಟದ ಕರವಸ್ತ್ರ

ದೇಶೀಯ ವಿದ್ಯಾಶಾಲೆಯ ಸರ್ಕಲ್ ಬಳಿ ಲಾಲ್‌ಬಾಗ್ ಕಡೆಗೆ ಹೋಗುವ 'ಕೆಂಪುವೂ ಸಾಲ್ಮರನ' ದಾರಿಯ ಬಸ್ ಸ್ಟ್ಯಾಂಡಿನ ಕೆಂಗಾವಿ ಬಣ್ಣದ ಸಿಮೆಂಟಿನ ಪೀಠದ ಮೇಲೆ, ಒರಗಿ ಕುಳಿತಿದ್ದ ಶೇಖರ್ ಗಾಳಿ ಕುಡಿಯುತ್ತ. ಅವನು ಗಾಳಿಯನ್ನೆ ಕುಡಿಯಬೇಕಾಗಿತ್ತು; ಕಾಫಿ ಕುಡಿಯಲು ಕಿಸೆಯಲ್ಲಿ ಕಾಸಿರಲಿಲ್ಲ.

ಕಾಫಿ ಬೇಕಾಗಿದ್ದರೆ-ಶಂಕರಪುರದ ಕೊಠಡಿಯಲ್ಲೆ ಕಾದಿರಬೇಕಾಗಿತ್ತು, ಗೆಳೆಯ ಗುಂಡಣ್ಣನ ಆಗಮನಕ್ಕಾಗಿ; ನಿತ್ಯದಂತೆ ಅವನು ನೀಡುವ ಆತಿಥ್ಯಕ್ಕೆ ಬಾಯೊಡ್ಡುವುದಕ್ಕಾಗಿ.

"…. ಥೂ, ಒಂದು ತಿಂಗಳ ಮೇಲೆ ಬಂತು, ಗುಂಡಣ್ಣನ ರೂಮಿನಲ್ಲಿ ತಳಊರಿ. ಪಾಪ, ಅವನೂ ಹೊಸದಾಗಿ ಕೆಲಸಕ್ಕೆ ಸೇರಿದಾನೆ. ಬಿ.ಎಸ್‌ಸಿ. ಮಾಡಿಕೊಂಡು ಗುಮಾಸ್ತೆ, ಇನ್‌ಷ್ಯೂರೆನ್ಸ್ ಕಂಪೆನಿಯಲ್ಲಿ. ನಾನು…."

ಬಸ್‌ಸ್ಟ್ಯಾಂಡಿನಲ್ಲಿ ಯಾರೂ ಇರಲಿಲ್ಲ-ಶೇಖರ್ ಹೊರತಾಗಿ. ೧೬ನೆಯ್ದ ನಂಬರ್ ಬಸ್ಸು ಸರ್ಕಲ್ ಬಳಸಿ, ಎರಡು ಮೂರು ಸಲ ಪೊಂಯ್ ಪೊಂಯ್ ಎಂದು ಕೂಗಿ, ಅಡ್ಡ ಬಂದ ಬಡಕಲು ನಾಯೊಂದನ್ನು ಕೊಲ್ಲುವಷ್ಟರಲ್ಲಿ ಕನಿಕರಿಸಿ, ಉಳಿಸಿ, ಭರ್ರನೆ ಮುಂದಕ್ಕೆ ಧಾವಿಸಿತು.

ಬಸ್ಸಿನ 'ಪೊಂಯ್ ಪೊಂಯ್' ಕುಂಟುತ್ತ ಬಳಿಗೆ ಬಂದ ಬಡಕಲು ನಾಯಿಯ ಕುಂಯ್-ಕುಂಯ್, ನಿರುದ್ಯೋಗದ ತಪಸ್ಸಿನಲ್ಲಿ ಮುಳುಗಿದ ಶೇಖರನನ್ನು ಎಚ್ಚರಿಸಿದುವು.

"….ಬಾಬಾ ಗೆಳೆಯ, ನನಗಿಂತಲು ನೀ ಮೇಲಲ್ಲೆ? ದೊರೆವುದು ನಿನಗೆ ಎಂಜಲೆಲೆ…."

ನಾಯಿಗೆ ಮಾತ್ರ ಕೇಳಿಬಂತು, ಶೇಖರ್ ನಕ್ಕ. ಆತ್ಮತಿರಸ್ಕಾರದ, 'ಹಹ್ಹ ಹಹ್ಹ' ಕಾರದ, ಮೆಲುನಗೆ. ಶೇಖರ್ ಉದಯೋನ್ಮುಖನಾದ ಕವಿ ಯೆಂಬುದಾಗಲಿ, ಅವನು ಬಗುಳಿದ್ದು ಪ್ರಗತಿಶೀಲ ಕವಿತೆಯ ಸಾಲೆಂದಾಗಲಿ

(ಆಗಿನ್ನೂ ನವ್ಯಕವಿತೆಯ ಸೀಗೆಯ ಮೆಳೆ ಹಬ್ಬಿರಲಿಲ್ಲ) ಆ ಬಡಕಲು ನಾಯಿಗೆ ತಿಳಿಯದು. ಕೇಳಿಬಂದ ಮಾನವ ವಾಣಿಯನ್ನು 'ಕುರೋ ಕುರೋ' ಎಂದೇ ಬಗೆಯಿತು; ತುಣುಕು ಆಹಾರಕ್ಕೆ ಆಹ್ವಾನವೆಂದೇ ಎಣಿಸಿತು; ಚಾಚಿದ್ದ ಶೇಖರನ ಕಾಲನ್ನು ಆತ್ಮೀಯವಾಗಿ ಮೂಸತೊಡಗಿತು.

ನಾಯಿಗೆ ಕಜ್ಜಿ ಹತ್ತದೆ ಹೋಗಿದ್ದರೆ ಅವನು ಅದರ ಕೆಳೆ ಬಯಸಿ ಬೆಳಸುತ್ತಿದ್ದ. ಹೃದಯದ ಕನಿಕರವನ್ನು ಮೆಟ್ಟಿ ಮೂವತ್ತಾರು ಬಗೆಯ ಮನಸ್ಸು ಅವನ ಕಾಲಿನಿಂದ ನಾಯನ್ನು ಒದೆಯಿಸಿತು. ನಾಯಿ ಗುರ್ರೆಂದಿತು. ಶೇಖರ್ ಬಿರುಸು ದನಿಯಲ್ಲಿ 'ಹುಷ್' ಎಂದ. ನಾಯಿ ಕುಂಟುತ್ತಲೇ ಓಡಿತು.

"....ಕಜ್ಜಿಯ ಜೊತೆಗೆ ಕುಂಟು ಬೇರೆ! ಆದರೂ, ಅದು ಹೇಗೆ ಗುರ್ರ್ ಅಂತು! Even a worm turns (ಹುಳು ಕೂಡ ಕೆರಳುತ್ತೆ). ಇನ್ನು ನಾಯನ್ನು ಕೇಳಬೇಕೆ? .... ನಾನು .... ನಿರುದ್ಯೋಗಿ .... ಸಮಾಜ ನನ್ನನ್ನು ಎಡಗಾಲಿನಿಂದ ಒದೆಯುತ್ತ ಇದೆ. ನಾನು ಏನು ಮಾಡಿದ್ದೇನೆ, ಏನು ಮಾಡ ಬಲ್ಲೆ? ಈ ಬಡಕಲ ನಾಯಿಯ ಹಾಗೆ ಬಗುಳಲೂ ಆರೆ. ಬಗುಳಿದರೆ, ಅದು ಸಪ್ಪೆ ಕವಿತೆಯಾಗುತ್ತೆ. ಕವಿತೆ! ಅದು ಯಾರಿಗೂ ಬೇಡ. ಪತ್ರಿಕೆಯವರಿಗೆ ಕೂಡ ಸ್ಥಳ ಭರ್ತಿ ಮಾಡುವುದಕ್ಕೆ ಅದು ಬೇಕು. ಕಾವ್ಯೋಪಾಸನೆ ಕಾವ್ಯೋಪ ವಾಸವೆ!....ಉಪವಾಸ....ಉಪವಾಸದ ಮುಂದಿ ತಿರುಗಿಬಿದ್ದರೆ ಅದೇ ಕ್ರಾಂತಿ.... ಕಮ್ಯುನಿಸಂ .... ಹೊಟ್ಟೆಗಿಲ್ಲದವರ ಶರಣಾಗತಿ, ವೇದಾಂತ .... ಹೌದು .... ನಾನು ಕಮ್ಯುನಿಸ್ಟಾಗಬೇಕು....ಕ್ರಾಂತಿ, ಹೋರಾಟ....ಯಾರ ಮೇಲೆ?...."

ಗಂಡು ಹೆಣ್ಣಿನ ಜೋಡಿಯೊಂದು ಲಾಲ್‌ಬಾಗಿನ ಕಡೆಗೆ ಸಂತಸದ ಹೂ ಹಾಸಿನ ಮೇಲೆ ನಡೆದು ಹೋಗುತ್ತಿತ್ತು. ಶೇಖರ್ ಆ ನಲ್ಲನಲ್ಲೆಯರ ಮೇಲೆ ಅಸೂಯೆಯ ಕಲ್ಲು ಬೀರಿದ; ಅದು ಅವರನ್ನು ತಾಗಲಿಲ್ಲ; ಆತ್ಮ ಸಂತುಷ್ಟಿಯ ವಿಹಾರ ನೌಕೆಯಲ್ಲಿ ಅವರು ತೇಲಿಹೋದರು.

"ಯಾರ ಮೇಲೆ?...."

ಭಾರಿಯ ಬ್ಯೂಕ್ ಕಾರೊಂದು 'ಕ್ವಂಯ್ಞ್ನಾಕ್' ಎಂದು ಭೂ ವಿಮಾನ ದಂತೆ ಧಾವಿಸಿತು: ಹಿಪ್ಪೊಪೊಟಾಮಸ್ಸಿಗೆ ರೆಕ್ಕೆ ಬಂದಂತೆ.

"ಕಾರುಳ್ಳ ಶ್ರೀಮಂತರ ಮೇಲೆ; ಕಾಲುಳ್ಳ ಬಡವರ ಹೋರಾಟ...."

× × × ×

ಎಂದಿನಂತೆ ಗುಂಡಣ್ಣ ಕಚೇರಿಯಿಂದ ಸಂಜೆ ಐದೂ ಮುಕ್ಕಾಲರ ಹೊತ್ತಿಗೆ ತನ್ನ ಕೊಠಡಿಗೆ ಹಿಂದಿರುಗಿದ್ದ. ಕಚೇರಿಯ ಶಿಸ್ತಿನ ಉಡುಪು ಕಳಚಿ, ಬಿಡುಬೀಸಾದ ಸಾಧಾರಣ ಉಡುಪನ್ನು ಧರಿಸಿ, ಕಾಫಿ ಕುಡಿಯಲೆಂದು ಹತ್ತಿರದ ಹೋಟಲಿಗೆ ಬಂದಾಗ ದೇಶೀಯ ವಿದ್ಯಾಶಾಲೆಯ ಗೋಪುರದ ಗಡಿಯಾರ ಢಣ್ ಢಣ್ ಢಣ್ ಎಂದು ಆರು ಹೊಡೆಯಿತು.

"....ಯಾಕೋ ಈಗ ಐದಾರು ದಿನದಿಂದ ಶೇಖರ್ ಸಂಜೆ ನನ್ನ ಕೈಗೆ ಸಿಕ್ಕುತ್ತಿಲ್ಲೇ ಇಲ್ಲ....ಕೈಲಿ ಕಾಸೂ ಇಲ್ಲ....ಒಂದು ಲೋಟ ಕಾಫಿಯೂ ಇಲ್ಲದೆ ಸೊರಗುತ್ತಾನಲ್ಲ, ಪಾಪ" ಎಂದುಕೊಂಡೇ ಗುಂಡಣ್ಣ ಹೋಟಲನ್ನು ಪ್ರವೇಶಿಸಿದ; ಯಥಾ ಸ್ಥಾನದಲ್ಲಿ ಕುಳಿತ.

"ಇಲ್ಲಿ ಬನ್ರೀ" ಎಂದು ಕಾಫಿ ಕುಡಿಯುತ್ತ ಇದ್ದ ವೆಂಕಟಪ್ಪ ಗುಂಡಣ್ಣನನ್ನು ಕರೆದ. ಗುಂಡಣ್ಣ ಆತನ ಪಕ್ಕದಲ್ಲಿ ಹೋಗಿ ಕುಳಿತು, ತಿಂಡಿ ತರುವ ಹಾಗೆ ಮಾಣಿಗೆ ಹೇಳಿದ.

"ಎಲ್ರೀ, ನಿಮ್ಮ ಸ್ನೇಹಿತರು....ಅದು ಯಾರು? ("ಶೇಖರ್") ಹ್ಞಾ, ಶೇಖರ್, ಅವರು ಕಾಣುವುದೇ ಇಲ್ಲವಲ್ರೀ ಈಚೆಗೆ?" – ಎಂದು ವೆಂಕಟಪ್ಪ, ಪ್ರಶ್ನಿಸಿದ.

"ಕಾಣದೆ ಏನು....ಎರಡು ಹೊತ್ತೂ ಊಟಕ್ಕೆ ನನ್ನ ಜೊತೆಗೇ ಬರುತ್ತಾರಲ್ಲ? ಆ ಹೊತ್ತಿನಲ್ಲಿ ನಾವೂ ನೀವೂ ಭೇಟಿಯಾಗುವುದಿಲ್ಲ, ಅಷ್ಟೆ.... ಬರಿಯ ಹೊಟ್ಟೆಯಲ್ಲಿ ಕಾಫಿ ಕುಡಿದರೆ ಮೈಗಾಗುವುದಿಲ್ಲ ಅಂತ ಬೆಳಗ್ಗೆ ಕಾಫಿಗೆ ಬರುವುದನ್ನು ಬಿಟ್ಟ. ಈಗ ಸಂಜೆಯೂ ಚಕ್ಕರ್. ನನಗೆ ಅರ್ಥವಾಗೋದಿಲ್ಲ ಅಂದುಕೊಂಡಿದ್ದಾನೆ, ಪಾಪ. ಊಟದ ಜೊತೆಗೆ ಕಾಫಿ ತಿಂಡಿಯ ಖರ್ಚೂ ನನ್ನ ತಲೆಯ ಮೇಲೆ ಯಾಕೆ ಬೀಳಬೇಕು ಅಂತ ಅವನ ಈ ಏರ್ಪಾಡು.... ಬಿ.ಎ. ಮಾಡಿ ಒಂದು ವರ್ಷ ಆಯ್ತು....ಕೆಲಸ ಇಲ್ಲ....ತಂದೆ ಮದುವೆ ಮಾಡಿಕೋ ಅಂತ ಬಲವಂತ ಮಾಡಿದರಂತೆ. ಉದ್ಯೋಗ ಇಲ್ಲದೆ ಮದುವೆ ಬೇಡ ಅಂತ, ತಂದೆಯ ಕೂಡ ಜಗಳ ಆಡಿಕೊಂಡು, ಕೆಲಸ ಹುಡುಕಿಕೊಂಡು ಈ ಊರಿಗೆ ಬಂದಿದ್ದಾನೆ...."

"ಏರ್‌ಕ್ರಾಫ್ಟಿನಲ್ಲಿ ಟ್ರೈ (ಪ್ರಯತ್ನ) ಮಾಡಿದರೊ?"

"ಈಗ ಅಲ್ಲೆಲ್ಲಿ ಸಿಕ್ಕುತ್ತೆ."

"ನಮ್ಮ ಮುಂಡಿ ಕೆಂಪಣ್ಣನವರಿಗೆ ಹೇಳಿ, ಬೇಕಾದರೆ ಅವರ ಮುಂಡಿಯ ಲೆಕ್ಕ ಬರೆಯುವ ಕೆಲಸ ಕೊಡಿಸುತ್ತೇನೆ. ತಿಂಗಳಿಗೆ ಮೂವತ್ತೋ ನಲವತ್ತೋ...."

"ನಮ್ಮ ಕಂಪೆನಿಯಲ್ಲಿ ಕ್ಲಾರ್ಕ್ ಕೆಲಸ ಕೊಡಿಸುತ್ತೇನೆ ಅಂದೆ. ಅದನ್ನೇ ಬೇಡ ಅಂದ...."

"ಹಾಗಾದರೆ ಯಾವ ಕೆಲಸ ಇಷ್ಟವಂತೆ?"

"ಪತ್ರಿಕೆಯ ಕಚೇರಿಯಲ್ಲಿ ಕೆಲಸ ಮಾಡಬೇಕೂ ಅಂತ ಅವನ ಇಷ್ಟ. ಯಾವುದೋ ಪತ್ರಿಕೆಯ ಸಂಪಾದಕರನ್ನು ನಿನ್ನೆ ಕಂಡಿದ್ದ. ಇವನು ಬಿ.ಎ., ಜೊತೆಗೆ ಕವಿ, ಅಂತ ತಿಳಿದ ಮೇಲೆ 'ನಮಗೆ ಇಂಟರ್ ಮಿಾಡಿಯಟ್ ಫೇಲಾಗಿರೋರೇ ಸಾಕು. ನೀವು ಇಲ್ಲಿ ಏಗಲಾರಿರಿ. ನ್ಯೂಸ್ ಎಡಿಟಿಂಗು ರಿಪೋರ್ಟಿಂಗು ಇವಕ್ಕೂ ಕವಿತೆಗೂ ತುಂಬಾ ದೂರ' – ಎಂದರಂತೆ. 'ಎಂಪ್ಲಾಯ್‌ಮೆಂಟ್ ಎಕ್ಸ್‌ಚೇಂಜಿ'ಗೂ ಅರ್ಜಿ ಹಾಕಿದಾನಂತೆ. ಅಲ್ಲಿಂದ ಇನ್ನೂ ಉತ್ತರ ಬಂದಿಲ್ಲ...."

"ನೀವು ಬ್ರಾಹ್ಮಣರಾಗಿ ಹುಟ್ಟಬಾರದಾಗಿತ್ತರೀ...."

"ಅದೆಲ್ಲಾ ತುಂಬ ದಿನ ಇರೋದಿಲ್ಲ ವೆಂಕಟಪ್ಪ. ಇದೆಲ್ಲಾ ಎಷ್ಟು ದಿನ ನಡೆದೀತು? ಕೊನೆಗೆ ಉಳಿಯೋದು ಎರಡೇ ಜಾತಿ; ದುಡ್ಡಿರೋರು, ದುಡ್ಡಿಲ್ಲದವರು; ಕಾರುಳ್ಳೋರು, ಕಾರಿಲ್ಲದವರು. ಇದು ತಪ್ಪಿತೊ, ಹೆಣ್ಣು ಜಾತಿ ಗಂಡು ಜಾತಿ. ಕೊನೆಗೆ ಎಲ್ಲ ಸಬ್‌ಲುಂಡ ಆಗುತ್ತೆ...."

"ಹಹ್ಹ ಹ್ಹ ಹ್ಹ ಹ....ಹಹ....ಹಹಾ....ಹೌದ್ರೀ....ಹಿಹ್ಹಿ ಹ್ಹಿ...."

× × × ×

ದೇಶೀಯ ವಿದ್ಯಾಶಾಲೆಯ ಗೋಪುರದ ಗಡಿಯಾರ ಆರು ಹೊಡೆದು ಮುಗಿದು, ಘಂಟಾನಾದದ ಅನುರಣನ ಶೇಖರನ ಕಿವಿಯಲ್ಲಿ ಇನ್ನೂ ಗುಂಯ್‌ಗುಡುತ್ತಿತ್ತು.

"....ಗುಂಡಣ್ಣ ಹೋಟಲಿನಲ್ಲಿ ನನ್ನನ್ನ ಜ್ಞಾಪಿಸಿಕೊಂಡು ಶಪಿಸುತ್ತ ಇರುತ್ತಾನೆ ಅಂತ ಕಾಣುತ್ತೆ. ಒಂದು ವರ್ಷ ಹೋಟಲಿನಲ್ಲಿ ಒಣವಾಸಮಾಡಿ, ಅಷ್ಟೋ ಇಷ್ಟೋ ದುಡ್ಡು ಕೂಡಿಟ್ಟು ಸಂಸಾರ ಹೂಡಬೇಕು ಅಂತ ಮಾಡಿಕೊಂಡಿದಾನೆ. ಈ ಮಧ್ಯೆ ನಾನು ಬೇರೆ ವಕ್ಕರಿಸಿದೆ. ಛೆ ಛೆ, ಇನ್ನು ಅಲ್ಲಿಂದ

ಕಾಲು ತೆಗೆಯಬೇಕು. ಸ್ನೇಹದ ದುರುಪಯೋಗ ಇದು.... ಪ್ರಪಂಚಕ್ಕೆ ನಾನು, ನನಗೆ ಪ್ರಪಂಚ, ಒಬ್ಬರಿಗೊಬ್ಬರು ಉಪಯೋಗ ಇಲ್ಲ .... ಲಾಲ್‌ಬಾಗಿನ ಕೆರೆಯೂ ನನಗೆ ಉಪಯೋಗಕ್ಕೆ ಬರೋದಿಲ್ಲ ಅಂತ ಕಾಣುತ್ತೆ, ಸಧ್ಯಕ್ಕೆ...."

ಶೇಖರ್ ಜೇಬಿನಲ್ಲಿದ್ದ ಲಕೋಟೆಯನ್ನು ಹೊರಕ್ಕೆ ತೆಗೆದು, ಅದರ ಮೇಲಿನ ವಿಳಾಸವನ್ನು ದೃಷ್ಟಿಸುತ್ತ ಕುಳಿತ: K. C. Shekhar, B.A., C/o M. Gundanna, B.Sc., No............Cross............Shankrpur, Basavanagudi P. O., Bangalore. ಕಾಗದವನ್ನು ಹೊರಕ್ಕೆ ತೆಗೆದ: "Your name has been registered for a post in the Department of Education........" (ವಿದ್ಯಾಭ್ಯಾಸದ ಇಲಾಖೆಯಲ್ಲಿ ಕೆಲಸಕ್ಕಾಗಿ ನಿಮ್ಮ ಹೆಸರನ್ನು ದಾಖಲು ಮಾಡಿದೆ.) ಈ ಘನವಾದ ವಾಕ್ಯವನ್ನು ಸಂಜೆಯ ಕೆಂಬೆಳಕು ಬೆಳಗುತ್ತಿತ್ತು.

ಭವ್ಯವಾದ ಭಾರಿಯ ಕಾರೊಂದು ಸದ್ದುಗದ್ದಲವಿಲ್ಲದೆ ರಾಜ ಶೀವಿಯಲ್ಲಿ ಮುಂದೆ ಸಾಗಿತು.

" ....ಮಂತ್ರಿಗಳ ಕಾರು ಅಂತ ಕಾಣುತ್ತೆ.... ಕ್ರಾಂತಿಯಾಗಿ ಕಮ್ಯುನಿಸಂ ಬಂದರೂ ಮಂತ್ರಿಪದವಿ ತಪ್ಪಿಸುವ ಹಾಗಿಲ್ಲವೋ. ಡೆಮಾಕ್ರಸಿಯಲ್ಲಿ ಒಂಬತ್ತು ಮಂತ್ರಿಗಳಾದರೆ ಕಮ್ಯುನಿಸ್ಟ್ ರಾಜ್ಯದಲ್ಲಿ ಹದಿನೆಂಟು ಮಂತ್ರಿಗಳಾಗುತ್ತಾರೆ.... ಗ್ರಹ ದೊಡ್ಡದಾದಷ್ಟೂ ಉಪಗ್ರಹಗಳ ಸಂಖ್ಯೆ ಹೆಚ್ಚಲೇ ಬೇಕಲ್ಲ.... ಆದ್ದರಿಂದ, ಮಂತ್ರಿ ಮಂತ್ರಿ ಅಂತ ಬಯ್ಯೋದು ತಪ್ಪು.... ಮಂತ್ರಿಗಳಿರಲಿ; ನಿರುದ್ಯೋಗ ತಪ್ಪಬೇಕು....ಅದಕ್ಕೆ, ಕ್ರಾಂತಿ, ಕಮ್ಯುನಿಸಂ.... ಅನಿವಾರ್ಯ. ಕಮ್ಯುನಿಸಂ ಬಂದರೆ ಕವಿಯ ಸ್ವಾತಂತ್ರ್ಯ ಹೋಗುತ್ತೆ ಅಂತಾರಲ್ಲ?.... ಆದ್ದರಿಂದ, ರಕ್ತಪಾತ ವಿಲ್ಲದ, ವ್ಯಕ್ತಿ ಸ್ವಾತಂತ್ರ್ಯವನ್ನು ಕಸಿದುಕೊಳ್ಳದ ಕಮ್ಯುನಿಸಂ ಬೇಕು.... ಮುಳ್ಳಿಲ್ಲದ ರೋಜ, ಕೆಸರಿನಲ್ಲಿ ಹುಟ್ಟದ ಸರೋಜ, ಮಲವಿಲ್ಲದ ಮನುಷ್ಯ ಜನ್ಮ.... ಎಲ್ಲ ಭ್ರಾಂತಿ.... ಆದ್ದರಿಂದ ಕ್ರಾಂತಿ.... ಕ್ರಾಂತಿ...."

ಕ್ರಾಂತಿಯೇ ಆಯಿತೇನೋ ಎನ್ನುವ ಹಾಗೆ ವಿಕಾರವಾಗಿ ಅರಚಿ ಕಿರಚಿ, ನೆಲವನ್ನು ಪರಚಿ, ಹಿಂದುಗಡೆ ಹೊಗೆಯನ್ನು ಎರಚಿ--ಫಟ್‌ಫಟಾ ಫಟ್-- ಎಂದು ಬಾಂಬಿನ ಆಸ್ಫೋಟನೆಯನ್ನು ಮಾಡಿ, ಬಸ್‌ಸ್ಟ್ಯಾಂಡಿನ ಎದುರಿಗೆಯೇ ಮೊಂಡುಬಿದ್ದು ನಿಂತಿತು 'ಮಾರಿಸ್' ಮರಿಕಾರು.

ಕಾರಿಗೆ ಡ್ರೈವರ್ ಎಸಗಿದ ಮಂತ್ರ–ತಂತ್ರಗಳೆಲ್ಲ ನಿಷ್ಫಲವಾದುವು.

ಕಾರ್ ಸ್ಟಾರ್ಟ್ ಆಗಬೇಕಾದರೆ ಅದರ ಬೆನ್ನು ಚಪ್ಪರಿಸಬೇಕಾಗಿತ್ತು. ಕಾರಿನ ದುರದೃಷ್ಟದಿಂದ ಡ್ರೈವರೆ ಓನರ್ (ಒಡೆಯ); ಪಕ್ಕದಲ್ಲಿದ್ದ ವ್ಯಕ್ತಿ– (ವರ್ಣಿಸಲೆ? ನಾನು ಯಾಕೆ ವರ್ಣಿಸಲಿ, ಕವಿ ಶೇಖರ್ ಇರುವಾಗ?)

"....ಆಟಂ ಯುಗದ ಅಪ್ಸರೆ, ಕಾರೊಳಗಿನ ನವನೀರೆ....ಥೂ ಥೂ, ಇದೇನಿದು? ನಾನು, ನಿರುದ್ಯೋಗಿ, ಕಾರಿನ ಮಂದಿಯನ್ನು ಹೊಗಳುವುದೇ?.... ಛೆ ಛೆ....ಕಾರಿನವರಿಗೆಲ್ಲ ಆಗಬೇಕು ತಕ್ಕ ಶಾಸ್ತಿ....ಓ ಕ್ರಾಂತಿ ನಾರಾಯಣ, ನಾಡಿನ ಕಾರುಗಳೆಲ್ಲ ನಡೆಗೆಟ್ಟು ನಿಲ್ಲಲಿ....

["He looks like a gentleman (ಮರ್ಯಾದಸ್ಥನ ಹಾಗೆ ಕಾಣುತ್ತಾರೆ). ಕಾರನ್ನ ನೂಕಿ ಅಂತ ನಾನು ಹೇಳುವುದಿಲ್ಲ, ಬೇಕಾದರೆ ನೀನು ಕೇಳು"...."All right" (ಆಗಲಿ, ಅದಕ್ಕೇನು)....]

"ನವದಂಪತಿಗಳು ಅಂತ ಕಾಣುತ್ತೆ. ನನಗಂತೂ ಈ ಭಾಗ್ಯ ಇಲ್ಲ. ನನ್ನ ಕೋಪವನ್ನೆಲ್ಲ ಇವರ ಮೇಲೆ ಯಾಕೆ ಕಾರ್‌ಲಿ....ಕಾರ್....ಕೆಟ್ಟು ಹೋಗಲಿ, ಹಾಳಾದ್ದು....ನವದಂಪತಿಗಳಾದರೆ ನಡೆದು ಹೋಗಲಿ. ನಾನೂ ನೋಡಿ ಸಂತೋಷಪಡುತ್ತೇನೆ. ಈಗ ತಾನೇ ಹೋಗಲಿಲ್ಲವೆ ಒಂದು ಜೋಡಿ, ಹಾಗೆ....ಆದರೆ, ಆಗ ಅವರನ್ನ ನೋಡಿ...."

"ಪ್ಲೀಸ್....ಸ್ವಲ್ಪ, ಕಾರನ್ನು, ನೂಕ್ತೀರ....?"

ಮೆಲುಕು ಹಾಕುತ್ತ ಮಲಗಿದ್ದ ಶೇಖರನ ಮನಸ್ಸು ಹೆಣ್ಣು ದನಿಯ ಹೂವೇಟಿಗೆ ಎಚ್ಚತ್ತಿತು: ಮಲಗಿದ್ದ ಕೊಳ ಹರಳುಗಲ್ಲಿನ ಹೊಡೆತಕ್ಕೆ ಸುಳಿಯಲೆ ತಳೆಯುವಂತೆ.

"ಪ್ಲೀಸ್....ವಿಲ್ ಯು ಪ್ಲೀಸ್...."

ಹೆಣ್ಣು ದನಿಯ ಕನ್ನಡ ನುಡಿ ಇನಿದು; ಹೆರನುಡಿ ವಿಭ್ರಾಮಕ!

'ಜೋ ಹುಕುಂ' ಎಂದು ಕಾರಿನ ಪಕ್ಕದಲ್ಲಿ 'ಅಟೆನ್‌ಷನ್' ನಿಂತ. ಕೋರಿಕೆಯ ದನಿ ಕೇಳಿಬಂತೇ ಹೊರತು ಕೋರಿಕೆಯೇನೆಂಬುದು ಅವನಿಗೆ ಅರಿವಾಗಿರಲಿಲ್ಲ.

ಮಬ್ಬು ಬೆಳಕಿನಲ್ಲಿಯೂ ಮೋಹಕವಾಗಿ ಕಂಡಿತು ಕಾರೊಳಗಿನ ಕನ್ಯೆಯ —

[ "ಕನ್ಯೆಯಲ್ಲ ಅಂತ ಕಾಣುತ್ತೆ; ಹೆಂಡತಿ ಇರಬಹುದು. ತಂಗಿ ಯಾಕಿರಬಾರದು? ಅಂತೂ,.... ]

ರಸ್ತೆಯ ದೀಪಗಳು ಹೊತ್ತಿಕೊಂಡುವು.

[ " .... ಅಂತೂ, bewitching beauty ( ಮರುಳುಗೊಳಿಸುವ ಚೆಲುವೆ )...."]

ಕಾರಿನ ಈ ಕಡೆಯೇ ಕುಳಿತಿದ್ದ ಮೋಹನಾಂಗಿಯ ಎಡಗೈ ಹಿಡಿಯಲ್ಲಿದ್ದ ಕರವಸ್ತ್ರ ಜಗುಳಿ ಟಾರ್ ನೆಲದ ಮೇಲೆ ಬಿತ್ತು.

ಶೇಖರನ ದೃಷ್ಟಿಯೂ ಅದರ ಮೇಲೆ ಬಿತ್ತು.

[ ........"If I am chivalrous, I must pick it up and give it to her ( ನಾನು ವೀರೋದಾರನಾದರೆ, ಅದನ್ನವಳಿಗೆ ಎತ್ತಿ ಕೊಡಬೇಕು )....ಇರಲಿ, ನೋಡೋಣ...." ]

"ವಿಲ್ ಯು ಪ್ಲೀಸ್....ದಯವಿಟ್ಟು, – ಸ್ವಲ್ಪ, – ಕಾರ್, – ಹಾಗೇ.... ದಯವಿಟ್ಟು...."

ಕೋಮಲ ಧ್ವನಿಯ ಕೋರಿಕೆಗೆ ಶೇಖರನ ಮನಸ್ಸು, ಕ್ರಾಂತಿಯ ಪಲ್ಲವಿಯನ್ನು 'ಕುರುಕು'ತ್ತಿದ್ದ ಮನಸ್ಸು, ಕುಸಿಯಿತು ; ಕಾರಿನವರ ಮೇಲೆ ಹೋರಾಟವೆಸಗಬೇಕೆಂದಿದ್ದ ಮನಸ್ಸು ಕಾರಿನ ಸೇವೆಗೆ ಸಿದ್ಧವಾಯಿತು.

"( ಒಳ್ಳೆ ಪೀಕಲಾಟಕ್ಕೆ ಬಂತಲ್ಲ )....ನೂಕಬೇಕು ತಾನೆ? ಅದಕ್ಕೇನು, ಆಗಲಿ...."

ಶೇಖರ್ ಕಾರಿನ ಬೆನ್ನನ್ನು ಮುಟ್ಟುವುದಕ್ಕಿಲ್ಲ, 'ಮಾಯಾ ಮಂತ್ರ' ಹಾಕಿದಂತಾಗಿ, ಅದು ತಟ್ಟನೆ ಹೊರಟುಬಿಟ್ಟಿತು.

'ಭರ್‌ರ್‌ರ್' ಎಂಬ ಕಿವಿ ಕೊರೆಯುವ ಶಬ್ದದೊಂದಿಗೆ 'ಥ್ಯಾಂಕ್ಸ್' ಎಂಬ ನಯನುಡಿ ಶೇಖರನ ಕಿವಿ ಕೊರೆದು, ಕೆನ್ನೆ ಸವರಿತು.

ಅಪರಿಚಿತೆಯ ಕರವಸ್ತ್ರ ನೆಲದಮೇಲೆ ಬಂದುಗೆ ಹೂವಿನ ಹಾಗೆ ಬಿದ್ದಿತ್ತು. ಕಾರು ಕಣ್ಮರೆಯಾಗುವವರೆಗೆ ನೆಟ್ಟಗೆ ನಿಂತಿದ್ದ ಶೇಖರನ ದೃಷ್ಟಿಗೆ ಬಿದ್ದು, ಅದನ್ನವನು ಎತ್ತಿಕೊಂಡ ; ಮರಳಿ ಬಸ್‌ಸ್ಟ್ಯಾಂಡಿನ ಪೀಠದ ಏಕಮಾತ್ರ ಅತಿಥಿಯಾದ.

ಶೇಖರನ ಕೈ ತಾನಾಗಿ ಮೂಗಿನ ಕಡೆಗೆ ಹೋಯಿತು; ಮೂಗು ಕರವಸ್ತ್ರದಲ್ಲಿ ಅಂತರ್ಗತವಾದ್ದ ನರುಗಂಪನ್ನು ಆಘ್ರಾಣಿಸತೊಡಗಿತು. ಘ್ರಾಣೇಂದ್ರಿಯವು ನೀಡಿದ ನರುಗಂಪಿನ ಸಂಚಕಾರಕ್ಕೆ ಮೆದುಳು ಮಾರು ಹೋಯಿತು. ಕಣ್ಣೆವೆ ಕ್ಷಣಕಾಲ ವಿಶ್ರಾಂತಿ ಸುಖವನ್ನಪೇಕ್ಷಿಸಿತು. ಶೇಖರ ಅನಿರ್ವಚನೀಯವಾದ ಸೌಖ್ಯ ವಿಭ್ರಾಂತಿಯಲ್ಲಿ ವಿಲೀನನಾಗಿದ್ದ.

× × × ×

ವಿದ್ಯಾಶಾಲೆಯ ಗೋಪುರದ ಗಡಿಯಾರ ಒಂದು ಸಲ 'ಢಣ್‌ಣ್' ಎಂದಿತು.

"....ಓ, ಆಗಲೇ ಏಳೂವರೆ! ಪಾಪ, ಗುಂಡಣ್ಣ ನನಗಾಗಿ ಊಟಕ್ಕೆ ಕಾದಿರುತ್ತಾನೆ ಅಂತ ಕಾಣುತ್ತೆ. ಇಲ್ಲ, ಇಲ್ಲ....ಮುಳ್ಳಿನ ಮೇಲೆ ಮುಳ್ಳು ಕೂತಿದೆ, ಇನ್ನೂ ಆರೂವರೆ. ಆದರೂ, ಹೇಗೆ ಕತ್ತಲೆ ಕವಿದುಕೊಂಡಿದೆ! ವಿಂಟರ್ (ಚಳಿಗಾಲ) An ideal season for .... (ಒಳ್ಳೆ ಸೊಗಸಾದ ಕಾಲ,....) ಬರೀ ಕನಸು! ಯಾಕೆ? ಇದ್ದೇ ಇದೆ, Standing offer (ಸ್ಥಿರ ಆಹ್ವಾನ) ಅಪ್ಪನಿಗೆ ಒಂದು ಕಾಗದ ಹಾಕಿದರೆ ಆಯಿತು, ಮದುವೆಗೆ ಏರ್ಪಾಡು ಮಾಡಿಬಿಡುತ್ತಾರೆ. ಆಗ ನನ್ನ ಪ್ರತಿಜ್ಞೆ ಏನಾಯಿತು? ಪ್ರತಿಜ್ಞೆ ಹಾಳಾಗಲಿ. ನಮ್ಮಪ್ಪ ನೋಡಿದ ಹೆಣ್ಣನ್ನ ನಾನು ಮದುವೆಯಾಗುವುದೆ? Nonsense ('ಅವಿವೇಕ'). ನಾನು ನೋಡಿದ ಹೆಣ್ಣನ್ನೇ ಮದುವೆಯಾಗ ಬೇಕು....ಈಗ ತಾನೆ ನೋಡಿದೆನಲ್ಲ? ಯಾಕಾಗಬಾರದು? ಕಾರಿನ ಕನ್ಯೆ! ಕಾರು, ಕಾರು .... ಛೆ ಛೆ .... ಕೂಡದು .... ಬಡವರ ಹೆಣ್ಣಾಗಬೇಕು .... But, ಬಡತನ– not a qualification (ಒಂದು ಗುಣವಲ್ಲ). Beauty, (ಚೆಲುವು) ಅದು ಮುಖ್ಯ. ಇವಳು, exceedingly beautiful (ಅತ್ಯಂತ ಚೆಲುವೆ) ಆದರೆ, ಮದುವೆಯಾಗಿದೆಯೋ ಏನೋ? ಮದುವೆಯಾಗಿಲ್ಲ ಅಂತ ಇಟ್ಟು ಕೊಳ್ಳೋಣ. **ಮದುವೆಯಾಗೇ ಇಲ್ಲ,** ಸರಿಯೆ. ಯಾವ ಜಾತಿಯೋ? ಕೆಲಸಕ್ಕೆ ಮಾತ್ರ ಅಲ್ಲದೆ ಮದುವೆಗೂ ಈ ಜಾತಿಯ ಮುಳ್ಳು ಬೇಲಿ ದಾಟಬೇಕಲ್ಲ, ಹಾಳಾದ್ದು. Kill two birds with one stone (ಒಂದು ಕಲ್ಲು ಬೀರಿ ಎರಡು ಹಕ್ಕಿ ಕೆಡವು). ಒಂದು Unemployment problem (ನಿರುದ್ಯೋಗ ಸಮಸ್ಯೆ); ಇನ್ನೊಂದು Marriage problem (ಮದುವೆಯ

ಸಮಸ್ಯೆ) ; ಎರಡನ್ನೂ ಬೆನ್ನಟ್ಟಿರುವ ಜಾತಿಯ ಭೂತ. ಇವನ್ನ ನಿರ್ನಾಮ ಮಾಡಬೇಕಾದರೆ, ಒಂದೇ ದಾರಿ – ಕಮ್ಯುನಿಸಂ....ಸರಿ, ಎಲ್ಲಿಂದ ಎಲ್ಲಿಗೋ ಬಂದೆ....ನಾನು ಏನು ಯೋಚಿಸುತ್ತಾ ಇದ್ದೆ ?....ಕಾರಿನ ಕನ್ಯೆ....ಹೌದು.... ಜಾತಿಯೂ ಅಡ್ಡಿ ಇಲ್ಲ ಅಂತ ಇಟ್ಟುಕೊಳ್ಳೋಣ ; ನಾನು ಗಂಡು ಜಾತಿ, ಅವಳು ಹೆಣ್ಣು ಜಾತಿ, ಇಷ್ಟೆ. Yes granted. ಆದರೆ, propose ಮಾಡುವುದು (ಮದುವೆಯಾಗುತ್ತೀಯ ಅಂತ ಕೇಳುವುದು) ಹೇಗೆ....? ಹೇ....ಶುದ್ಧ ಬೆಪ್ಪ ನಾನು. ಕರಚೀಫ್ (ಕರವಸ್ತ್ರ) ಮರೆತೇಬಿಟ್ಟೆನಲ್ಲ! ಕಾರ್ ಹೇಗಿದ್ದರೂ ಇದೇ ದಾರಿಯಲ್ಲಿ ಹಿಂತಿರುಗುತ್ತೆ; ಹಿಂದಿರುಗಲೇ ಬೇಕು. ಕೈಬೀಸಿ, ಕರ್‌ಚೀಫ್‌ನ ಹಿಂದಕ್ಕೆ ಕೊಡುವ ನೆಪದಲ್ಲಿ propose ಮಾಡೇ ಬಿಡುವುದು, ಆದದ್ದಾಗಲಿ. ಇಡೀ ದೇಶದ್ದಲ್ಲದೆ ಹೋದರೆ, ನನ್ನ Marriage problem ಆದರೂ solve (ಪರಿಹಾರ) ಆಗುತ್ತೆ. ಅದಿಲ್ಲವೋ, ಕಾರು ಬರುವ ಹೊತ್ತಿಗೆ ಸರಿಯಾಗಿ ಅದಕ್ಕೆ ಅಡ್ಡನಾಗಿ ನುಗ್ಗಿದರೆ – ದೇಶದ್ದಲ್ಲದೆ ಹೋದರೆ ನನ್ನ unemployment problem ಆದರೂ solve ಆಗುತ್ತೆ : ಲಾಲ್‌ಬಾಗ್ ಕೆರೆ, ಕೆಂಪಾಂಬುಧಿ ಕೆರೆ – ಒಂದನ್ನೂ ಹುಡುಕಿಕೊಂಡು ಹೋಗಬೇಕಾಗಿಲ್ಲ. ನನ್ನ ಅದೃಷ್ಟ ಪರೀಕ್ಷೆ ಮಾಡೇಬಿಡುತ್ತಿನಿ...."

× × × ×

ದೇಶೀಯ ವಿದ್ಯಾಶಾಲೆಯ ಗೋಪುರದ ಗಡಿಯಾರ ಮತ್ತೆ ಢಣ್ಣನೆ ಒಂದು ಸಲ ಬಾಜಿಸಿತು.

"....ಯಾಕೆ ಶೇಖರ್ ಬರಲೇ ಇಲ್ಲವಲ್ಲ? ಆಗಲೇ ಏಳೂವರೆ ಯಾಯಿತು....ಇಂಥ ಕಡೆಗೆ ಹೋಗಿರುತೀನಿ ಅಂತ ತಿಳಿಸಿರುವುದೂ ಇಲ್ಲ.... ಎಂಟು ಗಂಟೆ ಮಾರಿ ಹೋಟಲಿಗೆ ಹೋದರೆ ಪ್ರಯೋಜನವಿಲ್ಲ ಅನ್ನುವುದು ಅವನ ಅನುಭವಕ್ಕೂ ಬಂದಿದೆ...."

"ಸಾರ್, ಸಾರ್...." ಯಾರೋ ಬಾಗಿಲು ತಟ್ಟಿದರು. ಗುಂಡಣ್ಣ ಕೊಠಡಿಯ ಬಾಗಿಲು ತೆಗೆದ. ಸೂಟ್ ಧರಿಸಿದ ತರುಣ ವ್ಯಕ್ತಿಯೊಬ್ಬ ಹೊರಗೆ ನಿಂತಿದ್ದ ; ಕರವಸ್ತ್ರದಿಂದ ಹಣೆಯ ಬೆವರನ್ನು ಒರಸಿಕೊಳ್ಳುತ್ತಿದ್ದ.

"ನೀವೇ ತಾನೆ, ಮಿಸ್ಟರ್....ಗುಂಡಣ್ಣ....?"

"ಹೌದು, ಏನಾಗಬೇಕಾಗಿತ್ತು ?"

" ಶೇಖರ್....ನಿಮ್ಮ....ಫ್ರೆಂಡ್ ತಾನೆ?" ಉಗುಳು ನುಂಗುತ್ತ ಹೇಳಿದ ಅಪರಿಚಿತ ತರುಣ ವ್ಯಕ್ತಿ ; ಕಳವಳವಿತ್ತು ಕೊರಳಿನಲ್ಲಿ.

" ಹೌದು, ಹೌದು. ಏನಾಗಿದೆ? ಏನಾಗಿದೆ?"—ಆತಂಕವಿತ್ತು ಗುಂಡಣ್ಣನ ಗಂಟಲಿನಲ್ಲಿ.

" ಇದೇ ತಾನೇ ವಿಕ್ಟೋರಿಯಾ ಆಸ್ಪತ್ರೆಯಲ್ಲಿ ಬಿಟ್ಟು ಬಂದೆ. ಕಾರ್ ಆ್ಯಕ್ಸಿಡೆಂಟ್. ದೇವರ ದಯದಿಂದ ಪ್ರಾಣಾಪಾಯವಿಲ್ಲ. ತಲೆಗೇನೋ ಸ್ವಲ್ಪ ಏಟು ಬಿದ್ದಿದೆ; ಹೆಚ್ಚು ಗಾಯವೇನೂ ಆಗಿಲ್ಲ. Very surprisinng (ತುಂಬ ಆಶ್ಚರ್ಯ); ಇನ್ನೂ ಪ್ರಜ್ಞೆ ಬಂದಿಲ್ಲ...."

" ಹಾಗಾದರೆ, ನಾನು ಅವರ ಫ್ರೆಂಡ್ ಅಂತ ಹೇಗೆ ಗೊತ್ತಾಯ್ತು?"

" ಅವರ ಜೇಬಿನಲ್ಲಿ ಒಂದು ಕವರಿತ್ತು. ಅದರ ಮೇಲೆ 'ಕೇರ್ ಆಫ್' ಅಂತ ನಿಮ್ಮ ಹೆಸರು ವಿಳಾಸ ಬರೆದಿತ್ತು. ಅದರ ಮೇಲೆ, ಅಲ್ಲಿಂದ ನೇರವಾಗಿ ಇಲ್ಲಿಗೆ ಬಂದೆ....ಇರಲಿ, ಕಾರಿನಲ್ಲಿ ವಿವರವಾಗಿ ಎಲ್ಲ ಹೇಳ್ತೀನೆ....ನೀವು ಈಗಲೆ ಬರುವುದಕ್ಕೆ ಅಡ್ಡಿ ಏನೂ ಇಲ್ಲವಲ್ಲ?...."

" ಅಡ್ಡಿ! ಅಡ್ಡಿ ಅಂದರೆ ಆಗುತ್ತೆಯೋ ಸ್ವಾಮಿ? ನಡೀರಿ, ಬಂದೆ."

× × × ×

ಗುಂಡಣ್ಣ ಕಾರು ಹತ್ತಿ ಕುಳಿತ ಕೂಡಲೆ, ತರುಣ ವ್ಯಕ್ತಿ ಪರಿಯುಚದ ಪೀಠಿಕೆಯನ್ನು ಪ್ರಾರಂಭಿಸಿದ:

" ಇವರೇ ಗುಂಡಣ್ಣ, ಮಾಲತಿ. ಅವರು ತಕ್ಷಣ ಸಿಕ್ಕಿದ್ದು ನಮ್ಮ ಅದೃಷ್ಟ. This is my wife, Mr. Gundanna (ಈಕೆ ನನ್ನ ಹೆಂಡತಿ.)...."

ಅನಂತರ ಶೇಖರ್ ತನ್ನ ಕಾರಿಗೆ ಸಿಕ್ಕಿಬಿದ್ದ ಸಂಗತಿಯನ್ನು ಆತ ವಿವರಿಸಿದ.

"....ನೋಡಿವಿರಾ, ಆದದ್ದು ಹೀಗೆ. ನನ್ನದೇನೂ ತಪ್ಪಿಲ್ಲ. ಅವರದ್ದೂ ತಪ್ಪಿಲ್ಲ ಅಂತ ಕಾಣುತ್ತೆ. ಲಾಲ್‌ಬಾಗಿಗೆ ಹೋಗುವಾಗ ನನ್ನ ಕಾರು ನ್ಯಾಷನಲ್ ಹೈಸ್ಕೂಲು ಸರ್ಕಲ್ ಬಳಿ ನಿಂತುಹೋಯಿತಲ್ಲ, ಆಗ ಅವರೇ ಅದನ್ನ ನೂಕಿ ಸಹಾಯ ಮಾಡಿದರೂ ಅಂತಲೂ ಹೇಳಿದೆನಲ್ಲ, ಆಗಲೇ. ನನ್ನ ಹೆಂಡತಿ ಅಲ್ಲಿ ಕರ್‌ಚೀಫನ್ನ ಕೆಡವಿಕೊಂಡುಬಿಟ್ಟಳು ಅಂತ ಕಾಣುತ್ತೆ. ಅದು

ಅವರಿಗೆ ಸಿಕ್ಕಿದೆ ನಾವು ಲಾಲ್‌ಬಾಗಿನಿಂದ ಹಿಂದಿರುಗುವುದನ್ನೇ ಕಾದಿದ್ದು, ಕಾರು ನಿಲ್ಲಿಸಿ ನಮಗೆ ಕೊಡಬೇಕು ಅಂತ ಮಾಡಿಕೊಂಡಿದ್ದರು ಅಂತ ಕಾಣುತ್ತೆ, ಪಾಪ. ನಮ್ಮ ಕಾರು ಅಲ್ಲಿ ಬಸ್‌ಸ್ಟ್ಯಾಂಡಿನ ಬಳಿಗೆ ಹೋಗುವುದಕ್ಕೂ ಅವರು ನಮ್ಮ ಕಾರಿನ ಕಡೆಗೆ ನುಗ್ಗಿ ಬರುವುದಕ್ಕೂ ಸರಿಹೋಯಿತು. ಅವರು ಕೆಳಗೆ ಬಿದ್ದಾಗ, ಅವರ ಕೈಲಿ ನನ್ನ ಹೆಂಡತಿಯ ಕರ್‌ಚೀಫಿತ್ತು. ಉಳಿದದ್ದೆಲ್ಲ ಆಗಲೇ ಹೇಳಿದೆನಲ್ಲಾ....ಇನ್ನೊಂದು ವಿಷಯ ಏನೂ ಅಂದರೆ, ನಾನು ಬೊಂಬಾಯಿ ಯಲ್ಲಿದ್ದೇನೆ. The Karnataka Industrial & Trading Syndicate (ಕರ್ನಾಟಕ ಇಂಡಸ್ಟ್ರಿಯಲ್ ಅಂಡ್ ಟ್ರೇಡಿಂಗ್ ಸಿಂಡಿಕೇಟ್) ಅಂತ ಮಾಡಿಕೊಂಡಿದ್ದೇವೆ. ನಾನು ಅದರ .... Managing Director.... (ಮ್ಯಾನೇಜಿಂಗ್ ಡೈರೆಕ್ಟರ್).... ನಾವು ಕನ್ನಡದಲ್ಲಿ ಒಂದು ವಾರಪತ್ರಿಕೆ ಹೊರಡಿಸಬೇಕು ಅಂತ ಮಾಡಿಕೊಂಡಿದ್ದೇವೆ. ನಿಮ್ಮ ಸ್ನೇಹಿತರೂ ಉದ್ಯೋಗ ಇಲ್ಲದೆ ಇದ್ದಾರೆ ಅಂತ ಕಾಣುತ್ತೆ. ನೀವು ಅವರನ್ನ ಒಪ್ಪಿಸೋದಾದರೆ, ನಮ್ಮ ವಾರ ಪತ್ರಿಕೆಗೆ ಅವರನ್ನ ಸಂಪಾದಕರನ್ನಾಗಿ ನೇಮಿಸಿಕೊಳ್ಳುತ್ತೇವೆ...."

"ಅವರಿಗೆ ಆ ಕೆಲಸ ಹಿಡಿಸುತ್ತದೆಯೋ ಇಲ್ಲವೊ?"

"ಎಲ್ಲಾ ಹಿಡಿಸುತ್ತೆ. ಅವರ ಜೇಬಿನಲ್ಲಿ ಕಾಗದ ಇತ್ತು ನೋಡಿ, ಅದರ ಹಿಂದೆ ಒಂದು ಕವಿತೆ ಬರೆದಿದ್ದರು. ಅದು ಒಳ್ಳೆ ಕ್ರಾಂತಿಕಾರಕ ಭಾವನೆ ಗಳಿಂದ ತುಂಬಿದೆ. ನಮಗೆ ಬೇಕಾದ್ದೂ ಕ್ರಾಂತಿಕಾರಕ ಮನೋಭಾವದ ತರುಣ... ಹೇಗಾದರೂ ಇರಲಿ, ಅವರಿಗೆ ಬರವಣಿಗೆಯಲ್ಲಿ ಅಭಿರುಚಿ ಇದೆ ಅಂತ ಗೊತ್ತಾ ಯಿತಲ್ಲ. ಅವರ ಅಡ್ಡಿ ಇಲ್ಲದೆಹೋದರೆ, ನಾಳೆ ಬೆಳಗ್ಗೆಯೇ ನಮ್ಮ ಜೊತೆ ಬೊಂಬಾಯಿಗೆ ಪ್ರಯಾಣ ಮಾಡಬಹುದು...."

× × × ×

ಶೇಖರನಿಗೆ ಪ್ರಜ್ಞೆ ಬರುವ ಹೊತ್ತಿಗೂ, ಕಾರು ಆಸ್ಪತ್ರೆಯನ್ನು ತಲಪುವ ಹೊತ್ತಿಗೂ ಸರಿಹೋಗಿತ್ತು. ಅವನು ಕಣ್ಣು ಬಿಟ್ಟಾಗ, ಅವನ ಎದುರು ಮೂವರು ವ್ಯಕ್ತಿಗಳು ನಿಂತಿದ್ದರು. ಒಬ್ಬಾತನಂತೂ ಸುಪರಿಚಿತ: ಗುಂಡಣ್ಣ. ಇನ್ನಿಬ್ಬರು, ಎಲ್ಲೋ ನೋಡಿದ ಹಾಗಿದೆಯಲ್ಲ....?

"ಇವರು ಮಿ|| ರಾಜಗೋಪಾಲ್, ಈಕೆ ಮಿಸೆಸ್ ಮಾಲತಿ ರಾಜ ಗೋಪಾಲ್...."

"ಗೊತ್ತು ಗೊತ್ತು. ಹೆಸರು ಗೊತ್ತಿರಲಿಲ್ಲ, ಅಷ್ಟೆ. I am sorry, ನಿಮ್ಮ ಕರ್‌ಚೀಫ್...."

ಮಾಲತಿಯ ಕರವಸ್ತ್ರ ಶೇಖರನ ಕೈಯಲ್ಲೇ ಇತ್ತು.

"We are very sorry."

ಶೇಖರನನ್ನು ಆ ಒಡನೆಯೇ ಕರೆದುಕೊಂಡು ಹೋಗಬಹುದೆಂದು ವಾರ್ಡ್ ಡಾಕ್ಟರ್ ಅನುಮತಿಯಿತ್ತರು.

× × × ×

ರಾಜಗೋಪಾಲ್ ಶೇಖರನನ್ನೂ ಗುಂಡಣ್ಣನನ್ನೂ ಅವರ ಕೊಠಡಿಯಲ್ಲಿ ಬಿಟ್ಟು, ಮಾರನೆಯ ಬೆಳಗ್ಗೆ ಶೇಖರನನ್ನು ರೈಲ್ವೆ ಸ್ಟೇಷನ್ನಿಗೆ ಕರೆದೊಯ್ಯಲು ಟ್ಯಾಕ್ಸಿಯಲ್ಲಿ ಬರುವುದಾಗಿ ತಿಳಿಸಿ, ಅವರನ್ನು ಬೀಳ್ಕೊಂಡು ತನ್ನ ಮಾವನ ಮನೆಗೆ ಹಿಂದಿರುಗಿದ.

ರಾತ್ರಿ ಮಲಗಿದಾಗ ಶೇಖರ ತಾನೂ ನಿದ್ದೆ ಹೋಗಲಿಲ್ಲ, ಗುಂಡಣ್ಣನಿಗೂ ನಿದ್ದೆ ಬರಗೊಡಿಸಲಿಲ್ಲ.

"....ನೋಡು ಗುಂಡಣ್ಣ, ನಾನು ಬರೆಯುವ ಮೊದಲ ಸಂಪಾದಕೀಯ ಹೀಗೆ ಆರಂಭವಾಗುತ್ತೆ:

"....ಸ್ವಾತಂತ್ರ್ಯ ಬಂದರೂ ನಮಗೆ ಆರ್ಥಿಕ ಮೋಕ್ಷ ದೊರಕಲಿಲ್ಲ. ನಮಗೆ ಸಮಾಜವಾದದ ಆಧಾರದ ಮೇಲೆ ನೆಲೆಗೊಂಡ ಸುಖೀರಾಜ್ಯ ಬೇಕು, ಜಾತ್ಯತೀತ ರಾಷ್ಟ್ರ ಬೇಕು, ಕೆಂಪಿಲ್ಲದ ಕಮ್ಯುನಿಸಂ ಬೇಕು; ಕಾಂಗ್ರೆಸ್ಸಿನ ಮಂದಗಮನ....ಕೇಳುತ್ತಾ ಇದೀಯೇನೋ?"

ಗುಂಡಣ್ಣ ಸುಳ್ಳು ಸುಳ್ಳು ಗೊರಕೆ ಹೊಡೆಯುತ್ತಿದ್ದ.

# ಇದೇ ಲೇಖಕರ ಇತರ ಕೃತಿಗಳು

## ಕವಿತೆ

ಹಕ್ಕಿ ಹಾಡು
ಆ ಚಿತ್ರಗಳು ಮತ್ತು ಇತರ ಕಥನ ಕವನಗಳು
ಹೂವಾಡಿಗಿತ್ತಿ
ಕಾವ್ಯಾಲಾಪ
ಅಶೋಕ ಚಕ್ರ
ರಾಷ್ಟ್ರರಥ
ರಾಗ
ರಾಷ್ಟ್ರದಿನೋತ್ಸವಗೀತ

## ಸಣ್ಣ ಕಥೆ

ಶಿಲಾಮುಖ
ಮಾರ್ಗದರ್ಶಕ
ಬಿಸಿಲು–ಬೆಳುದಿಂಗಳು
ರತಿದೇವಿ

## ಕಾದಂಬರಿ

ಭಾಗ್ಯಲಕ್ಷ್ಮಿ
ರಾಬಿನ್‌ಸನ್‌ಕ್ರೂಸೊ
ಮಾದನ ಮಗಳು
ನಂಜಿನ ಸವಿ
ಸೌಭಾಗ್ಯವತಿ
ಸ್ನೇಹದ ಕಾಣಿಕೆ
ತಾಯ ಬಯಕೆ
ಕುಂಕುಮ ಭಾಗ್ಯ

## ನಾಟಿಕ

ಹೂವಿನ ಆಸೆ
ತೆರೆಮರೆಯ ಚಿತ್ರಗಳು
ಸ್ವಯಂವರ
ಕವಿಯ ಹೆಂಡತಿ ( ಅಚ್ಚಿನಲ್ಲಿ )

## ಪ್ರಬಂಧ

ಮುಗಿಲುಗಳು
ಹಿಡಿ ಹೂ